# FIRST

# CANARESE INSTRUCTOR

# ಬಾಲಶಿಕ್ಷೆಯು



**SIXTH EDITION**

MANGALORE

PRINTED BY STOLZ & REUTHER, BASEL MISSION PRESS

1868



# ಅಕ್ಷರ ಮಾಲೆಯು.



## ಸ್ವರಗಳು.

ಅ ಆ ಇ ಈ

ಉ ಊ ಋ ಎ

ಏ ಐ ಒ ಓ

ಔ ಅಂ ಅಃ



## ವ್ಯಂಜನಗಳು.

ಕ ಖ ಗ ಘ ಙ

ಚ ಛ ಜ ಝ ಞ

ಟ ಠ ಡ ಢ ಣ

ತ ಥ ದ ಧ ನ

ಪ ಫ ಬ ಭ ಮ

ಯ ರ ಲ ವ

ಶ ಷ ಸ ಹ ಳ ಕ್ಷ

## ಸಮರೂಪವಾದ ಅಕ್ಷರಗಳು.

ಲ ಅ ಆ ಲ ಉ ಊ

ಬ ಒ ಓ ಔ ಜ ಜ ಚ ಬ

ಐ ಪ ಫ ಷ ಘ ಸ

ಎ ವ ಮ ಎ ಏ

ಾ ಐ ಇ ಈ ಣ

ಲ ಠ ರ ಯ ಝ ಛ

ಬ ದ ಧ ಥ ಡ ಢ ಟ

ಗ ನ ಸ ಗ ಳ

ಲ ಕ ಕ್ಷ ತ ಶ

೨ ಖ ಋ ಞ

## ಬೇರೆ ಬೇರೆ ವರ್ಣಗಳು ಹುಟ್ಟುವ ಸ್ಥಾನಗಳು.

*ಕಂಠದಲ್ಲಿ ಹುಟ್ಟುವ ವರ್ಣಗಳು:

ಅ ಆ ಕ ಖ ಗ ಘ ಙ ಹ

†ತಾಲುವಲ್ಲಿ ಹುಟ್ಟುವ ವರ್ಣಗಳು:

ಇ ಈ ಚ ಛ ಜ ಝ ಞ ಯ ಶ

‡ಮೂರ್ಧದಲ್ಲಿ ಹುಟ್ಟುವ ವರ್ಣಗಳು:

ಋ ೠ ಟ ಠ ಡ ಢ ಣ ರ ಷ ಳ

§ದಂತದಲ್ಲಿ ಹುಟ್ಟುವ ವರ್ಣಗಳು:

ತ ಥ ದ ಧ ನ ಲ ಸ

¶ಓಷ್ಠದಲ್ಲಿ ಹುಟ್ಟುವ ವರ್ಣಗಳು:

ಉ ಊ ಪ ಫ ಬ ಭ ಮ

---

*ಕಂಠ: ಕತ್ತು. †ತಾಲು: ಅಣ್ಣಾಲಿಗೆ. ‡ಮೂರ್ಧ: ಬಾಯೊಳಗಣಾಟ್ಟವು. §ದಂತ: ಹಲ್ಲು. ¶ಓಷ್ಠ: ತುಟಿ.

*ನಾಸಿಕೆಯಲ್ಲಿ ಹುಟ್ಟುವ ವರ್ಣಗಳು:

ಂ ಙ ಞ ಣ ನ

---

ಕಂಠ ತಾಲುಗಳಲ್ಲಿ ಹುಟ್ಟುವ ವರ್ಣಗಳು:

ಎ ಏ ಐ

---

ಕಂಠ ಓಷ್ಠಗಳಲ್ಲಿ ಹುಟ್ಟುವ ವರ್ಣಗಳು:

ಒ ಓ ಔ

---

*ನಾಸಿಕೆ: ಮೂಗು.



## ಕಾಗುಣಿತವು.

| ಅ | ಆ | ಇ ಿ | ಈ ೀ | ಉ ು | ಊ ೂ | ಋ |
|---|---|---|---|---|---|---|
| ಕ | ಕಾ | ಕಿ | ಕೀ | ಕು | ಕೂ | ಕೃ |
| ಖ | ಖಾ | ಖಿ | ಖೀ | ಖು | ಖೂ | ಖೃ |
| ಗ | ಗಾ | ಗಿ | ಗೀ | ಗು | ಗೂ | ಗೃ |
| ಘ | ಘಾ | ಘಿ | ಘೀ | ಘು | ಘೂ | ಘೃ |
| ಙ | ಙಾ | ಙಿ | ಙೀ | ಙು | ಙೂ | ಙೃ |
| ಚ | ಚಾ | ಚಿ | ಚೀ | ಚು | ಚೂ | ಚೃ |
| ಛ | ಛಾ | ಛಿ | ಛೀ | ಛು | ಛೂ | ಛೃ |
| ಜ | ಜಾ | ಜಿ | ಜೀ | ಜು | ಜೂ | ಜೃ |
| ಝ | ಝಾ | ಝಿ | ಝೀ | ಝು | ಝೂ | ಝೃ |
| ಞ | ಞಾ | ಞಿ | ಞೀ | ಞು | ಞೂ | ಞೃ |
| ಟ | ಟಾ | ಟಿ | ಟೀ | ಟು | ಟೂ | ಟೃ |
| ಠ | ಠಾ | ಠಿ | ಠೀ | ಠು | ಠೂ | ಠೃ |
| ಡ | ಡಾ | ಡಿ | ಡೀ | ಡು | ಡೂ | ಡೃ |
| ಢ | ಢಾ | ಢಿ | ಢೀ | ಢು | ಢೂ | ಢೃ |
| ಣ | ಣಾ | ಣಿ | ಣೀ | ಣು | ಣೂ | ಣೃ |
| ತ | ತಾ | ತಿ | ತೀ | ತು | ತೂ | ತೃ |
| ಥ | ಥಾ | ಥಿ | ಥೀ | ಥು | ಥೂ | ಥೃ |
| ದ | ದಾ | ದಿ | ದೀ | ದು | ದೂ | ದೃ |
| ಧ | ಧಾ | ಧಿ | ಧೀ | ಧು | ಧೂ | ಧೃ |
| ನ | ನಾ | ನಿ | ನೀ | ನು | ನೂ | ನೃ |

## ಕಾಗುಣಿತವು.

| ಎ ೆ | ಏ ೇ | ಐ ೈ | ಒ ೊ | ಓ ೋ | ಔ ೌ |
|---|---|---|---|---|---|
| ಕೆ | ಕೇ | ಕೈ | ಕೊ | ಕೋ | ಕೌ |
| ಖೆ | ಖೇ | ಖೈ | ಖೊ | ಖೋ | ಖೌ |
| ಗೆ | ಗೇ | ಗೈ | ಗೊ | ಗೋ | ಗೌ |
| ಘೆ | ಘೇ | ಘೈ | ಘೊ | ಘೋ | ಘೌ |
| ಙೆ | ಙೇ | ಙೈ | ಙೊ | ಙೋ | ಙೌ |
| ಚೆ | ಚೇ | ಚೈ | ಚೊ | ಚೋ | ಚೌ |
| ಛೆ | ಛೇ | ಛೈ | ಛೊ | ಛೋ | ಛೌ |
| ಜೆ | ಜೇ | ಜೈ | ಜೊ | ಜೋ | ಜೌ |
| ಝೆ | ಝೇ | ಝೈ | ಝೊ | ಝೋ | ಝೌ |
| ಞೆ | ಞೇ | ಞೈ | ಞೊ | ಞೋ | ಞೌ |
| ಟೆ | ಟೇ | ಟೈ | ಟೊ | ಟೋ | ಟೌ |
| ಠೆ | ಠೇ | ಠೈ | ಠೊ | ಠೋ | ಠೌ |
| ಡೆ | ಡೇ | ಡೈ | ಡೊ | ಡೋ | ಡೌ |
| ಢೆ | ಢೇ | ಢೈ | ಢೊ | ಢೋ | ಢೌ |
| ಣೆ | ಣೇ | ಣೈ | ಣೊ | ಣೋ | ಣೌ |
| ತೆ | ತೇ | ತೈ | ತೊ | ತೋ | ತೌ |
| ಥೆ | ಥೇ | ಥೈ | ಥೊ | ಥೋ | ಥೌ |
| ದೆ | ದೇ | ದೈ | ದೊ | ದೋ | ದೌ |
| ಧೆ | ಧೇ | ಧೈ | ಧೊ | ಧೋ | ಧೌ |
| ನೆ | ನೇ | ನೈ | ನೊ | ನೋ | ನೌ |

## ಕಾಗುಣಿತವು.

| ಅ | ಆ ಾ | ಇ ಿ | ಈ ೀ | ಉ ು | ಊ ೂ | ಋ ೃ |
|---|---|---|---|---|---|---|
| ಪ | ಪಾ | ಪಿ | ಪೀ | ಪು | ಪೂ | ಪೃ |
| ಫ | ಫಾ | ಫಿ | ಫೀ | ಫು | ಫೂ | ಫೃ |
| ಬ | ಬಾ | ಬಿ | ಬೀ | ಬು | ಬೂ | ಬೃ |
| ಭ | ಭಾ | ಭಿ | ಭೀ | ಭು | ಭೂ | ಭೃ |
| ಮ | ಮಾ | ಮಿ | ಮೀ | ಮು | ಮೂ | ಮೃ |
| ಯ | ಯಾ | ಯಿ | ಯೀ | ಯು | ಯೂ | ಯೃ |
| ರ | ರಾ | ರಿ | ರೀ | ರು | ರೂ | ರೃ |
| ಲ | ಲಾ | ಲಿ | ಲೀ | ಲು | ಲೂ | ಲೃ |
| ವ | ವಾ | ವಿ | ವೀ | ವು | ವೂ | ವೃ |
| ಶ | ಶಾ | ಶಿ | ಶೀ | ಶು | ಶೂ | ಶೃ |
| ಷ | ಷಾ | ಷಿ | ಷೀ | ಷು | ಷೂ | ಷೃ |
| ಸ | ಸಾ | ಸಿ | ಸೀ | ಸು | ಸೂ | ಸೃ |
| ಹ | ಹಾ | ಹಿ | ಹೀ | ಹು | ಹೂ | ಹೃ |
| ಳ | ಳಾ | ಳಿ | ಳೀ | ಳು | ಳೂ | ಳೃ |
| ಕ್ಷ | ಕ್ಷಾ | ಕ್ಷಿ | ಕ್ಷೀ | ಕ್ಷು | ಕ್ಷೂ | ಕ್ಷೃ |



ಕಾಗುಣಿತವು.

| ಎ ೆ | ಏ ೇ | ಐ ೈ | ಒ ೊ | ಓ ೋ | ಔ ೌ |
|---|---|---|---|---|---|
| ಪೆ | ಪೇ | ಪೈ | ಪೊ | ಪೋ | ಪೌ |
| ಫೆ | ಫೇ | ಫೈ | ಫೊ | ಫೋ | ಫೌ |
| ಬೆ | ಬೇ | ಬೈ | ಬೊ | ಬೋ | ಬೌ |
| ಭೆ | ಭೇ | ಭೈ | ಭೊ | ಭೋ | ಭೌ |
| ಮೆ | ಮೇ | ಮೈ | ಮೊ | ಮೋ | ಮೌ |
| ಯೆ | ಯೇ | ಯೈ | ಯೊ | ಯೋ | ಯೌ |
| ರೆ | ರೇ | ರೈ | ರೊ | ರೋ | ರೌ |
| ಲೆ | ಲೇ | ಲೈ | ಲೊ | ಲೋ | ಲೌ |
| ವೆ | ವೇ | ವೈ | ವೊ | ವೋ | ವೌ |
| ಶೆ | ಶೇ | ಶೈ | ಶೊ | ಶೋ | ಶೌ |
| ಷೆ | ಷೇ | ಷೈ | ಷೊ | ಷೋ | ಷೌ |
| ಸೆ | ಸೇ | ಸೈ | ಸೊ | ಸೋ | ಸೌ |
| ಹೆ | ಹೇ | ಹೈ | ಹೊ | ಹೋ | ಹೌ |
| ಳೆ | ಳೇ | ಳೈ | ಳೊ | ಳೋ | ಳೌ |
| ಕ್ಷೆ | ಕ್ಷೇ | ಕ್ಷೈ | ಕ್ಷೊ | ಕ್ಷೋ | ಕ್ಷೌ |

ಶಬ್ದಗಳು.

ಏಕಾಕ್ಷರ ಶಬ್ದಗಳು.

ಆ ಯೊ ಕೈ ಖೈ ತಾ ಬಾ ನೀ ನಾ

ಮೈ ಬೈ ಶ್ರೀ ಹೂ ಗೌ ನೌ ಖ ಗೀ

## ದ್ವ್ಯಕ್ಷರ ಶಬ್ದಗಳು.

| | | | | |
|---|---|---|---|---|
| ಅರ | ಆನೆ | ಇಲಿ | ಈಗ | ಉಡು |
| ಊರು | ಎಲೆ | ಏಳು | ಐದು | ಒಲೆ |
| ಓಲೆ | ಔಡು | ಕಥೆ | ಕಾಗೆ | ಕಿವಿ |
| ಕೀಲು | ಕುರಿ | ಕೂಸು | ಕೆರೆ | ಕೇರಿ |
| ಕೈದು | ಕೊನೆ | ಕೋಣ | ಗಿಡ | ಘಾಯ |
| ಚಾಪೆ | ಜಡೆ | ತಲೆ | ದೀಪ | ಧೊರೆ |
| ನೀರು | ಪಾಠ | ಬಾಲ | ಭಾವಿ | ಮಠ |
| ಯುಗ | ರಾಗಿ | ಲೇಪ | ವೀರ | ಶೀರೆ |
| ಸಾಕು | ಹಣ | ಕ್ಷಮೆ | ಕ್ಷೇಮ | ಕ್ಷೇತ್ರ |

---

## ತ್ರ್ಯಕ್ಷರ ಶಬ್ದಗಳು.

| | | |
|---|---|---|
| ಅಪೇಕ್ಷೆ | ಆಕಾರ | ಇರವು |
| ಈಳಿಗೆ | ಉಗುರು | ಊರಟೆ |
| ಎಲುವು | ಏಳಿಗೆ | ಐಮೂಲೆ |
| ಒಗಟು | ಓಗರ | ಔಷಧ |
| ಕಮಲ | ಗಮನ | ಘಳಿಗೆ |
| ಚಾಮರ | ಛಳಕು | ಜನನಿ |
| ಝುಗಳ | ಟಗರು | ಠಿಕಾಣಿ |
| ಡೊಂಗರ | ತಪ್ಪಟೆ | ದೀವಿಗೆ |
| ಧರಣಿ | ನಾಗರ | ಪಗಡಿ |

| | | |
|---|---|---|
| ಬದುಕು | ಬೆರಳು | ಭೋಜನ |
| ಮರುಳು | ಯೋಚನೆ | ರಾವುತ |
| ಲವಣ | ವಚನ | ಶೋಧನೆ |
| ಸುರಳಿ | ಹಸರು | ಕ್ಷತ್ರಿಯ |

---

## ಚತುರಕ್ಷರ ಶಬ್ದಗಳು.

| | | |
|---|---|---|
| ಅರಸನು | ಆಲೋಚನೆ | ಉಪಯೋಗ |
| ಒಲೆಕಾರ | ಕನಿಕರ | ಗಲಿಬಿಲಿ |
| ಜಾಜಿಹೂವು | ನಿರಾಕಾರ | ಪರಲೋಕ |
| ಬೋಧಕನು | ಮುದುಕನು | ಶೆರೆಮನೆ |
| ಸಮಾಚಾರ | ಹುಡುಗನು | ಕ್ಷೌರಿಕನು |

---

## ಪಂಚಾಕ್ಷರ ಶಬ್ದಗಳು.

| | |
|---|---|
| ಅಪರೂಪವು | ಆಲಾಪನೆಯು |
| ಉಪಶಮನ | ಎಳಚೀಮರ |
| ಏಕಮತವು | ಐರದಾಳಿಯು |
| ಕುರುಡತನ | ತೋಟಗಾರನು |
| ದನದವನು | ನಾಗಕೇಸರಿ |
| ಪರಾಜಯವು | ಬಳೆಗಾರನು |
| ಮೋಸಗಾರನು | ಯಜಮಾನನು |
| ಶನಿವಾರವು | ಸಹೋದರನು |

---

## ಷಡಕ್ಷರ ಶಬ್ದಗಳು.

| | |
|---|---|
| ಅಪರಿಮಿತವು | ಆಭರಣಗಳು |
| ಈಚಲಮರವು | ಕರೆಯುವವನು |
| ಗಾರಡಿಗಾರನು | ಜನಸಮೂಹವು |
| ತಿಳುವಳಿಕೆಯು | ದುರಾಲೋಚನೆಯು |
| ಸಮಾಧಾನವಿರು | ಶಾನಭೋಗತನ |

---

## ಉಚ್ಚಾರಣೆ ಮಾಡುವಾಗ್ಯೆ ಸ್ವಲ್ಪಕಡಿಮೆ ಒಂದೇ ತರವಾಗಿ ಕೇಳುವ ಶಬ್ದಗಳು.

| | | | |
|---|---|---|---|
| ಕತ್ತಿ | ಕುತ್ತಿ | ಕತ್ತೆ | ಗದ್ದೆ |
| ಗಾದೆ | ಕಟ್ಟೆ | ಕಥೆ | ಕಟ್ಟು |
| ಕಿಟ್ಟು | ಕುಟ್ಟಿ | ಕುಟ್ಟೆ | ಕೂಟ |
| ಕೂಡ | ಕೇಡು | ಕೊಡೆ | ಕೋಟಿ |
| ಕೋಡಿ | ಕೋತಿ | ಕಚ್ಚಾ | ಕಾಚು |
| ಕಿಚ್ಚು | ಕುಚ | ಕೂಚು | ಕೂರು |
| ಗುರು | ಕರ | ಕರಿ | ಗರ |
| ಗರಿ | ಕರು | ಕರೆ | ಕಿರಿ |
| ಗಿರಿ | ಕುರಿ | ಗುರಿ | ಗಾರು |
| ಗಾರೆ | ಗೀರು | ಕೇರೆ | ಗೇರಿ |
| ಕೇರಿ | ಗೇರು | ಗೋರಿ | ಗೌರಿ |
| ಕೌರು | ಕಥೆ | ಕಪ್ಪು | ಕಪ್ಪೆ |

| | | | |
|---|---|---|---|
| ಕಬ್ಬು | ಕಾಪಿ | ಕಾಪು | ಕುಪ್ಪು |
| ಕೂಪ | ಕುಪ್ಪೆ | ಕೋಪ | ಕೊಪ್ಪು |
| ಕಣ | ಗಣ | ಕಣಿ | ಕಣೆ |
| ಕಾಣ | ಗಾಣ | ಕಾಣಿ | ಗಿಣಿ |
| ಗುಣ | ಗೇಣಿ | ಗೆಣೆ | ಗೋಣಿ |
| ಕೋಣ | ಕೋಣೆ | ಕಕ್ಕ | ಕಕ್ಕು |
| ಕಕ್ಕೆ | ಕುಕ್ಕಿ | ಕುಕ್ಕೆ | ಕೊಕ್ಕು |
| ಕೊಕ್ಕೆ | ಕಗ್ಗ | ಕಾಗಿ | ಕುಗ್ಗಿ |
| ಕಗ್ಗು | ಕಂಡ | ಕಂದ | ಕಂಡಿ |
| ಕಂಟ | ಕುಂಡ | ಕುಂಡೆ | ಕುಂಟ |
| ಕಂದು | ಕಂತು | ಕಾಂತ | ಕಾಂತಿ |
| ಕುಂತ | ಕುಂತಿ | ಚರ | ಜರ |
| ಚರು | ಚಾರು | ಚಿರ | ಚಿರಿ |
| ಜರಿ | ಚೂರು | ಚೂರಿ | ಚೂರು |
| ಚೋರ | ಜೋರು | ಜರೆ | ಜಾರ |
| ಜಾರೆ | ಜಡ | ಜಡಿ | ಜಾಡ |
| ಜೇಡಿ | ಜಡೆ | ಜೋಡು | ಜಟ್ಟಿ |
| ಜತೆ | ಜಾತಿ | ಜಿತ | ಜಿದ್ದು |
| ಜಗಲಿ | ಜಗಳ | ಜಗುಳು | ಜೋಗುಳ |
| ಜಿಗಳಿ | ಜಿಗರು | ತಟ್ಟು | ತಟ |
| ತಟ್ಟಿ | ತಾಟು | ತುಟಿ | ತೇಟಿ |
| ತೋಟ | ತೊಟ್ಟು | ತರಕ | ತರಕಿ |

| | | | |
|---|---|---|---|
| ತಾರಕ | ತಾರಕಿ | ತಿರಕ | ತೀರಿಕೆ |
| ತುರಕ | ತುರಗ | ತುರಗು | ತರಗು |
| ದನ | ದಾನ | ದಿನ | ದೀನ |
| ಧನ | ಧನಿ | ಧನು | ಧ್ಯಾನ |
| ಧೇನು | ಧಾನ್ಯ | ನರ | ನರಿ |
| ನರೆ | ನಾರಿ | ನಾರು | ನಿರಿ |
| ನೀರು | ನೆರೆ | ನೊರೆ | ನಗರ |
| ನಗರು | ನಗಾರಿ | ನಾಗರ | ನಿಗರ |
| ನರಕ | ನರಿಗ | ನಾಳಿಕ | ನಾಳೀಕ |
| ನಾಲಿಗೆ | ಪರ | ಪರಿ | ಪರೆ |
| ಪಾರ | ಪಾರೆ | ಪುರ | ಪೊರೆ |
| ಭರ | ಭಾರ | ಭಾರಿ | ಭೀರು |
| ಭೂರಿ | ಭೇರಿ | ಭೋರು | ಮಿತ್ರ |
| ಮೂತ್ರ | ಮಾತ್ರೆ | ಮಾದ್ರಿ | ಮುದ್ರೆ |
| ವರ | ವರೆ | ವಾರ | ವಾರಿ |
| ವಾರು | ವಾರೆ | ವೀರ | ವುರಿ |
| ಉರು | ಊರು | ವೈರ | ಸರ |
| ಸರಿ | ಸಾರ | ಸಾರಿ | ಸಾರು |
| ಸಿರ | ಸಿರಿ | ಸೀರೆ | ಸುರು |
| ಸಾರಿ | ಸುರೆ | ಸೂರೆ | ಸೇರು |
| ಸೊರ | ಸೋರು | ಸಂಕೇತ | ಸಂಕೇತಿ |
| ಸಂಗಾತ | ಸಂಗತಿ | ಸಂಗೀತ | ಸಂಗಡ |

| | | | |
|---|---|---|---|
| ಸಂಗಟ | ಸಿಂಗಾಡಿ | ಸರಳ | ಸರಾಳ |
| ಸರಳು | ಸರಸ | ಸರಸಿ | ಸರಸು |
| ಸಾರಸ | ಸಿರಸ್ಸು | ಸುರಸ | ಹಲ |
| ಹಲ್ಲಿ | ಹಲ್ಲು | ಹಳು | ಹಳ್ಳ |
| ಹಳ್ಳಿ | ಹಾಲು | ಹಾಲೆ | ಹಾಳೆ |
| ಹಾಳಿ | ಹಾಳು | ಹುಲಿ | ಹುಲು |
| ಹುಲ್ಲು | ಹುಲ್ಲೆ | ಹುಳ | ಹುಳಿ |
| ಹೊಲೆ | ಹೊಲಿ | ಹೋಳಿ | ಹೋಳು |



## ಶಬ್ದಾವಳಿಯು.

| | | | | | | |
|---|---|---|---|---|---|---|
| ಅಂಶಜ | ಆಧಾರ | ಇರುಳು | ಈಡು | ಉರಗ | ಊಟ | ಋಣ |
| ಕಣ | ಕಾಲು | ಕಿಡಿ | ಕೀವು | ಕುಲ | ಕೂಲಿ | ಕೃಪೆ |
| ಖರೆ | ಖಾರ | ಖಿನ್ನ | | ಖುರ | ಖೂಳ | |
| ಗಳ | ಗಾಣ | ಗಿಳಿ | ಗೀತ | ಗುಡಿ | ಗೂಡು | ಗೃಹ |
| ಘನ | ಘಾತ | ಘಿರ್ರನ್ನು | ಘೀಂಕೋ | ಘುಟಿಕೆ | ಘೂಕ | ಘೃತ |
| ಚಡಿ | ಚಾಡಿ | ಚಿಗರಿ | ಚೀಲ | ಚುರುಕು | ಚೂರಿ | |
| ಛಂದ | ಛಾಯೆ | ಛಿನ್ನ | ಛೀ | ಛುರಿಕೆ | | |
| ಜಡ | ಜಾತಿ | ಜಿನಗು | ಜೀವ | ಜುಟ್ಟು | ಜೂಜು | |
| ಝಗಳ | ಝಾಡಿ | | ಝಿಲ್ಲಿಕೆ | ಝುಮ್ಮು | ಝೂಲು | |
| ಟಗರು | ಟಾವು | ಟಿಟ್ಟಿಭ | ಟೀಕು | ಟುಮ್ಕು | ಟೂಕಿ | |
| ಠಕ್ಕ | ಠಾಣೆ | ಠಿಕಾಣಿ | ಠೀವಿ | | | |
| ಡಬ್ಬ | ಡಾಬು | ಡಿಳ್ಳ | ಡೀಕಾಟ | ಡುಕ್ಕ | | |
| ಢಕ್ಕ | ಢಾಕು | ಢಿಳ್ಳಿ | | ಢುಳಿ | | |
| ತಗರ | ತಾತ | ತಿಗುಳು | ತೀರ | ತುಟಿ | ತೂತು | ತೃಣ |
| ಥರ | ಥಾಲಿ | | | ಥುಬುಕ್ಕ | ಥೂ | |
| ದಡ | ದಾರಿ | ದಿನ | ದೀನ | ದುರಿತ | ದೂರು | ದೃಢ |
| ಧನ | ಧಾವತಿ | ಧಿಟ | ಧೀರ | ಧುರ | ಧೂಪ | ಧೃತಿ |
| ನರಿ | ನಾಯಿ | ನಿಜ | ನೀಲ | ನುಡಿ | ನೂರು | ನೃಪ |
| ಪಕ್ಷಿ | ಪಾಪ | ಪಿತ್ತ | ಪೀಡೆ | ಪುಡಿ | ಪೂಜೆ | ಪೃಥ್ವಿ |
| ಫಲ | ಫಾಲ | ಫಿರಂಗಿ | | ಫುಲ್ಲ | ಫೂತ್ಕಾರ | |
| ಬಲ | ಬಾಲ | ಬಿಗಿ | ಬೀಜ | ಬುರುಡೆ | ಬೂದಿ | |
| ಭಯ | ಭಾಷೆ | ಭಿಕ್ಷೆ | ಭೀತಿ | ಭುಜ | ಭೂಮಿ | ಭೃಗು |
| ಮರ | ಮಾತು | ಮಿತಿ | ಮೀಸೆ | ಮುಖ | ಮೂಗು | ಮೃಗ |
| ಯವ | ಯಾತ | | | ಯುವತಿ | ಯೂಥ | |
| ರಥ | ರಾಶಿ | ರಿಪು | ರೀತಿ | ರುಚಿ | ರೂಢಿ | |

## ಶಬ್ದಾವಳಿಯು.

| | | | | | |
|---|---|---|---|---|---|
| ಎದೆ | ಏಡಿ | ಐಶ್ವರ್ಯ | ಒಡೆಯ | ಓದು | ಔತಣ |
| ಕೆಲಸ | ಕೇಡು | ಕೈರವ | ಕೊಡೆ | ಕೋತಿ | ಕೌಮಾರ |
| | ಖೇದ | ಖೈ | ಖೊಬ್ಬರಿ | ಖೋಡಿ | |
| ಗೆರೆ | ಗೇಣು | ಗೈರಿಕ | ಗೊನೆ | ಗೋಧಿ | ಗೌಡ |
| | ಘೇರಿ | | ಘೊಂಟಿ | ಘೋಷ | |
| ಚೆಲುವು | ಚೇಳು | ಚೈತನ್ಯ | ಚೊಚ್ಚಲು | ಚೋಟು | ಚೌಕ |
| | ಛೇದ | | | ಛೋಜಿಗ | |
| ಜೆರಿ | ಜೇನು | ಜೈಮಿನಿ | ಜೊಲ್ಲು | ಜೋಳ | ಜೌಳಿ |
| | ಝೇಂಕಾರ | | ಝೊಮ್ಮನೆ | ಝೋಪಡಿ | |
| ಟೆಕ್ಕೆ | | | ಟೊಳ್ಳು | ಟೋಪಿ | ಟೌಳಿ |
| | ಠೇವಣಿ | | ಠೊಣ್ಗ | | ಠೌಳಿ |
| | ಡೇಗೆ | | ಡೊಂಕು | ಡೋಣಿ | ಡೌಲು |
| | ಢೇರ | | | ಢೋಕು | |
| ತೆರೆ | ತೇರು | ತೈಲ | ತೊಡೆ | ತೋಪು | ತೌಡು |
| ಥೆರೆ | | ಥೈಲಿ | | | |
| ದೆಬ್ಬೆ | ದೇಶ | ದೈವಿಕ | ದೊಣ್ಣೆ | ದೋಷ | ದೌಟು |
| | ಧೇನು | ಧೈರ್ಯ | ಧೊರೆ | ಧೋರಣೆ | ಧೌತ |
| ನೆಲ | ನೇಗಲು | ನೈದಿಲೆ | ನೊಣ | ನೋಟ | ನೌಲು |
| ಪೆಟ್ಟು | ಪೇಟೆ | ಪೈರು | ಪೊದೆ | ಪೋರ | ಪೌತ್ರ |
| | ಫೇನ | ಫೈಸಲು | | ಫೋಡಿ | ಫೌಜು |
| ಬೆರಳು | ಬೇಲಿ | ಬೈಲು | ಬೊಗರಿ | ಬೋಕಿ | ಬೌದ್ಧ |
| | ಭೇದ | ಭೈರಿಗೆ | | ಭೋಗ | ಭೌಮ |
| ಮೆಣಸು | ಮೇಣ | ಮೈದುನ | ಮೊನೆ | ಮೋಡ | ಮೌಳಿ |
| ಯೆಳ್ಳು | ಯೇನು | | | ಯೋಗ | ಯೌವನ |
| ರೆಕ್ಕೆ | ರೇವು | ರೈತ | ರೊಕ್ಕ | ರೋಗ | ರೌದ್ರ |

| | | | | | | |
|---|---|---|---|---|---|---|
| ಲಯ | ಲಾಭ | ಲಿಪಿ | ಲೀನ | ಲುಬ್ಧ | ಲೂಟಿ | |
| ವನ | ವಾಸ | ವಿಧಿ | ವೀಣೆ | | | ವೃಕ್ಷ |
| ಶರ | ಶಾಪ | ಶಿಶು | ಶೀಸ | ಶುಕ | ಶೂರ | ಶೃಂಗ |
| ಷಷ್ಟಿ | ಷಾಷ್ಠ | ಷಿಡ್ಗ | | ಷುರು | | |
| ಸಭೆ | ಸಾಲ | ಸಿಂಹ | ಸೀಮೆ | ಸುಖ | ಸೂರೆ | ಸೃತಿ |
| ಹಡಗು | ಹಾಡು | ಹಿಡಿ | ಹೀನ | ಹುಲಿ | ಹೂವು | ಹೃದಯ |
| ಕ್ಷಣ | ಕ್ಷಾಮ | ಕ್ಷಿತಿ | ಕ್ಷೀಣ | ಕ್ಷುದ್ರ | ಕ್ಷೂಣತೆ | |

---

## ಒತ್ತಕ್ಷರಗಳ ಉದಾಹರಣೆಗಳು.

ಕ್ಕ ಅಕ್ಕ ತಕ್ಕ ರಕ್ಕಸ ಬೊಕ್ಕಸ ಕೊಕ್ಕರೆ ರೊಕ್ಕ ಸಕ್ಕರೆ ಉತ್ಕಲಾ
ಪುಷ್ಕಳ ಉಲ್ಕಾಪಾತ ನಿಷ್ಕಲಾ ಭಾಸ್ಕರ ತಸ್ಕರ ಮಸ್ಕು
ಖ್ಖ ಲೆಖ್ಖ ದುಖ್ಖ ರೊಖ್ಖ ಒಖ್ಖಣಿಸು ಮುಖ್ಖ
ಗ್ಗ ಮಗ್ಗಲು ನೆಗ್ಗಲು ನುಗ್ಗು ಹಿಗ್ಗು ತಗ್ಗು ಮುಗ್ಗು ಬೊಗ್ಗು ಉದ್ಗಮ
ಘ್ಘ ಅಘ್ಘ ಉದ್ಘಾಟನೆ
ಚ್ಚ ಅಚ್ಚ ವೆಚ್ಚ ಕಚ್ಚು ಕಿಚ್ಚು ಹುಚ್ಚು ನಿಶ್ಚಯ ಆಶ್ಚರ್ಯ ಪಶ್ಚಾತ್ತಾಪ
ಛ್ಛ ತುಚ್ಛೀಕರಿಸು ಇಚ್ಛೆ ಸ್ವಚ್ಛ ಗುಚ್ಛಾ ಶಿರಚ್ಛೇದನ ಪರಿಚ್ಛೇದ
ಜ್ಜ ಸಜ್ಜನ ಅಜ್ಜಿ ಮಜ್ಜಿಗೆ ಕಜ್ಜಿ ಸಜ್ಜಿಗೆ ಸಜ್ಜೆ ಲಜ್ಜೆ ಲಿಬ್ಜ
ಝ್ಝ ಜಝ್ಝರಿತ
ಞ್ಞ ಗ್ಞಾನ ವಿಜ್ಞಾಪನ ಸಂಗ್ಞೆ ಪ್ರಗ್ಞೆ
ಟ್ಟ ಹೊಟ್ಟೆ ಹುಟ್ಟು ಹಟ್ಟಿ ಕಟ್ಟಳೆ ಪಟ್ಟಣ ಇಷ್ಟ ಕುಷ್ಟ ಅಷ್ಟು ಕಷ್ಟ
ಭ್ರಷ್ಟ ನಷ್ಟ ಸ್ಪಷ್ಟ
ಠ್ಠ ಅಠ್ಠವಣೆ ರೋಗಿಷ್ಠ ಗರ್ವಿಷ್ಠ ಅಂಗುಷ್ಠ ಶ್ರೇಷ್ಠ
ಡ್ಡ ಅಡ್ಡ ಗಿಡ್ಡ ಹೆಡ್ಡ ವೊಡ್ಡ ದುಡ್ಡು ಬಡ್ಡಿ ಬಡ್ಡು ಕಡ್ಡಿ
ಣ್ಣ ಅಣ್ಣ ಹೆಣ್ಣು ಮಣ್ಣು ಕಣ್ಣು ಉಷ್ಣ ಕೃಷ್ಣ ತೀಕ್ಷ್ಣ
ತ್ತ ಕತ್ತೆ ಅತ್ತೆ ಮುತ್ತು ಎತ್ತು ಅತ್ತಲಾಗಿ ಹಿತ್ತಲು ಉತ್ತರ ಕತ್ತಲೆ

| | | | | | |
|---|---|---|---|---|---|
| ಲೆಖ್ಖ | ಲೇಖಣಿ | | ಲೊಟ್ಟೆ | ಲೋಹ | ಲೌಕಿಕ |
| ವೆಜ್ಜ | ವೇದ | ವೈರಿ | ವೊಡವೆ | ವೋಲಗ | |
| ಶೆರೆ | ಶೇಷ | ಶೈವ | | ಶೋಕ | ಶೌರ್ಯ |
| | | | | ಷೋಡಶ | |
| ಸೆರಗು | ಸೇವೆ | ಸೈನ್ಯ | ಸೊಗಸು | ಸೋರೆ | ಸೌಖ್ಯ |
| ಹೆಗಲು | ಹೇನು | ಹೈಕಳು | ಹೊಸ | ಹೋಮ | ಹೌದು |
| | ಕ್ಷೇತ್ರ | | | ಕ್ಷೋಣಿ | ಕ್ಷೌರ |

---

ರಕ್ತ ಉಕ್ತಿ ಮುಕ್ತಿ ಭಕ್ತಿ ಶಕ್ತಿ ಆಪ್ತ ತಪ್ತ ಗುಪ್ತ ಸಪ್ತ
ಪುಸ್ತಕ ಮಸ್ತಕ ಹಸ್ತ ವಸ್ತು ಬಸ್ತಿ ಮುಸ್ತಿ ಕುಸ್ತಿ ಕಸ್ತೂರಿ
ಥ್ಥ ಅಶ್ವತ್ಥ ಸ್ಥಾನ ಸ್ಥಿತಿ ಸ್ಥಳ ಸಂಸ್ಥಾನ ಸಂಸ್ಥ ಸಂಸ್ಥೆ ಸಂಸ್ಥಿತ
ದ್ದ ಮುದ್ದು ಗದ್ದಲ ಗದ್ದಿಗೆ ಗುದ್ದಲಿ ಗುದ್ದು ಶಬ್ದ ಲಬ್ದ ಗದ್ದೆ
ದ್ಧ ಶುದ್ಧ ಸಿದ್ಧ ಲುಬ್ಧ ಮುಗ್ಧ ದಗ್ಧ ಯುದ್ಧ ಪ್ರಸಿದ್ಧಿ ವಿರುದ್ಧ
ನ್ನ ಅನ್ನ ಚಿನ್ನ ಭಿನ್ನ ಚನ್ನಾಗಿ ಚೆನ್ನಿ ಚೆನ್ನಿಗ ಸಂಪನ್ನ ರತ್ನ ಯತ್ನ
ಅಗ್ನಿ ಲಗ್ನ ಸ್ವಪ್ನ ಸ್ನಾನ ಸ್ನೇಹ ಪ್ರಶ್ನೆ ಮಧ್ಯಾಹ್ನ ಪ್ರಸನ್ನ
ಪ್ಪ ಅಪ್ಪ ಇಪ್ಪೆ ಉಪ್ಪು ಒಪ್ಪಿಗೆ ಕಪ್ಪು ಕಪ್ಪೆ ಸೊಪ್ಪು ಕಲ್ಪ ಅಲ್ಪ
ಪುಷ್ಪ ಉತ್ಪತ್ತಿ ತಪ್ಪು ಚಪ್ಪೆ ಚಪ್ಪರ ಚಪ್ಪಳಿ
ಫ್ಫ ನಿಷ್ಫಲ ಸತ್ಫಲ ಸ್ಫಟಿಕ ಸ್ಫಾರ ಸ್ಫೀತ ಸ್ಫುಟ
ಬ್ಬ ಕಬ್ಬು ಕೊಬ್ಬು ಹಬ್ಬ ಕಬ್ಬಿಣ ಮೊಬ್ಬು ವುಬ್ಬು ಉದ್ಬಲ ಒಬ್ಬ
ಭ್ಭ ಉದ್ಭವ ಅದ್ಭುತ ಸದ್ಭಾವ ತದ್ಭವ ಸದ್ಭಕ್ತಿ ಉದ್ಭಟ
ಮ್ಮ ಅಮ್ಮ ಹೆಮ್ಮೆ ಕಮ್ಮಾ ಘಮ್ಮನೆ ಸುಮ್ಮನೆ ಯುಗ್ಮ ಆತ್ಮ ಸ್ಮಶಾನ
ಶ್ಲೇಷ್ಮ ಆಕಸ್ಮಿತ ವಿಸ್ಮಯ ಬ್ರಾಹ್ಮಣ ಕಲ್ಮಷ ತಾಳ್ಮೆ ಷಣ್ಮುಖ
ಸ್ಮೃತಿ ಶ್ಮಶ್ರು ಸ್ಮರ ಸ್ಮರಣೆ ಸ್ಮಾರ್ತ ಸ್ಮಯ
ಯ್ಯ ಅಯ್ಯ ವಾಕ್ಯ ಆಖ್ಯಾನ ಆಗ್ಯೆ ಶ್ಲಾಘ್ಯ ಯೋಗ್ಯ ಅವಾಚ್ಯ
ಪೂಜ್ಯ ವ್ಯಾಜ್ಯ ಜ್ಯೋತಿ ತ್ಯಾಗ ತ್ಯಾವ ನಿತ್ಯ ಕೃತ್ಯ ಸತ್ಯ

ಆತಿಥ್ಯ ವಿದ್ಯ ಉದ್ಯೋಗ ಧ್ಯಾನ ನ್ಯಾಯ ರಮ್ಯ ತಾರತಮ್ಯ
ಮಾಲ್ಯ ಪಲ್ಯ ಅವ್ಯಯ ಹವ್ಯ ಶಿಷ್ಯ ಅಪ್ರವೇಶ್ಯ ಆಲಸ್ಯ
ಅಪಹಾಸ್ಯ ಉದ್ದಿಶ್ಯ ಹ್ಯಾಗೆ ಪಾಳ್ಯ

ರ್ರ ಘರ್ರನೆ ತಿರ್ರನೆ ಪರ್ರನೆ ಕರ್ರಗೆ ಚಕ್ರ ಕ್ರಮ ಗ್ರಾಮ ಗ್ರೀವ ಘ್ರಾಣ
ವಜ್ರ ಮಂತ್ರ ಪಾತ್ರೆ ಪತ್ರ ಕ್ಷುದ್ರ ದರಿದ್ರ ಭದ್ರ ರಂಧ್ರ ವಿಪ್ರ
ಕ್ಷಿಪ್ರ ಶುಭ್ರ ನಮ್ರ ವ್ರಯ ತೀವ್ರ ಶ್ರೇಯ ಶ್ರೋತ್ರ ಸಹಸ್ರ ಹ್ರಸ್ವ

ರ್‍ರ ಅರ್ಕ ತರ್ಕ ಮರ್ಕಟ ಮೂರ್ಖ ದುರ್ಗ ಮಾರ್ಗ ವರ್ಗ ಸ್ವರ್ಗ
ಅರ್ಘ ದೀರ್ಘ ಅರ್ಚನೆ ಚರ್ಚೆ ಮೂರ್ಛೆ ಆರ್ಜನೆ ವಿಸರ್ಜನೆ
ಸಮ್ಮಾರ್ಜನೆ ಗರ್ಜನೆ ನಿರ್ಝರ ಕರ್ಣ ವರ್ಣ ವಿಸ್ತೀರ್ಣ ಆರ್ತವ
ಕಾರ್ತೀಕ ವಾರ್ತೆ ಅರ್ಥ ಸಾಮರ್ಥ್ಯ ಮರ್ದನ ಅರ್ಧ ವರ್ಧನ
ಅರ್ಪಣೆ ಸಂತರ್ಪಣೆ ಅರ್ಬುದ ನಿರ್ಬಲ ಆರ್ಭಟ ಗರ್ಭ ದರ್ಭೆ
ಕರ್ಮ ನಿರ್ಮಲ ದುರ್ಮತ ಕಾರ್ಯ ಧೈರ್ಯ ವೀರ್ಯ
ದುರ್ಲಭ ದುರ್ವಾರ್ತೆ ಹರ್ಷ ಕರ್ಷಣೆ ಅರ್ಹ

ಲ್ಲ ಮೆಲ್ಲಗೆ ಸೊಲ್ಲು ಕಲ್ಲು ಮಲ್ಲಿಗೆ ಹುಲ್ಲು ವಿಕ್ಲಬ ಕ್ಲೀಬ ಪ್ಲವಂಗ
ಆಮ್ಲ ಶ್ಲೇಷ್ಮ ಶುಕ್ಲ ಬೆಲ್ಲ ಭಲ್ಲ ಭಲ್ಲುಕ

ವ್ವ ಅವ್ವ ಪಕ್ವ ವಾಗ್ವಾದ ಉಛ್ವಾಸ ಜ್ವಾಲೆ ಪ್ರಜ್ವಲ ಶಾಡ್ವಲ ತ್ವರಿತ
ಶುದ್ಧತ್ವ ಸದ್ವಂಶ ಅಧ್ವರ ಅಧ್ವಾನ ಅನ್ವಯ ಪಲ್ವಲ ಅಶ್ವ ಶಾಶ್ವತ
ಸ್ವಭಾವ ಸ್ವಾಮಿ ಪೃಥ್ವಿ ಸತ್ವ ತತ್ವ

ಶ್ಶ ನಿಶ್ಶಬ್ದ ನಿಶ್ಶಕ್ತಿ

ಸ್ಸ ಮನಸ್ಸು ತಪಸ್ಸು ನಿಸ್ಸಾರ ಉತ್ಸವ ಅಪ್ಸರ ಮತ್ಸರ ಸಂವತ್ಸರ

ಲ್ಹ ಕಲ್ಹಾರ

ಳ್ಳ ವೃಳ್ಳ ಕಳ್ಳ ಹಳ್ಳ ಬಳ್ಳ ಹಳ್ಳಿ ಬಳ್ಳಿ ಕೊಳ್ಳಿ ಕಳ್ಳಿ ಮುಳ್ಳು ಸುಳ್ಳು

---

## ಎರಡು ಒತ್ತು ಕೂಡಿದ ಅಕ್ಷರಗಳು.

ಸ್ತ್ರೀಯು ವಕ್ತ್ರ ಮರ್ತ್ಯ ಊರ್ಧ್ವ ದಂಷ್ಟ್ರ ದುಷ್ಕೃತ
ಮಹರಾಷ್ಟ್ರ ಯಜ್ಞವಲ್ಕ್ಯ ಅಗಸ್ತ್ಯ ತಾರ್ಕ್ಷ್ಯ.

---

## ಅನುಸ್ವಾರವು ಂ.

ಅಂಕೆ ಶಂಖ ಅಂಗಿ ಅಂಗೈಯಿ ಮುಂಗೈಯಿ ಲಂಘನೆ ಚಂಚಲ ಮ್ಲೇಂಛ ಅಂಜಲಿ ಅಂಟು ಒಂಟಿ ಕಂಠ ಗಂಡು ಅಂಣ ಮಂಣು ಅಂತ್ಯ ಕಾಂತಿ ಗ್ರಂಥ ಎಂದೆಂದಿಗೂ ಬಂಧನ ಚಿಂನ ಅಂನ ಸಂಪಿಗೆ ಗುಂಪು ಸಂಫುಲ್ಲ ಉಂಬಳಿ ಕಂಬಳಿ ಸಂಬಂಧ ಸ್ತಂಭ ಕುಂಭಿಣಿ ತಂಮ ಸಂಮತಿ ಕೆಂಮು ಸಂಯುಮಿ ಸಂಯೋಗ ಸಂರಕ್ಷಣೆ ಸಂಲಾಪ ಸಂವತ್ಸರ ಸಂಶಯ ಅಂಶ ಮಾಂಸ ಹಂಸ ಸಿಂಹ ಸಂಹಾರ ಸಂಸ್ಕೃತ ಸಂಸಾರ ಸಂಕ್ಷೇಪ.

---

## ವಿಸರ್ಗವು ಃ.

ಅಂತಃಕರಣ ಪ್ರಾತಃಕಾಲ ಮನಃಪೂರ್ವಕ ಪುನಃಸ್ಥಾಪನೆ.

---

## ಅರ್ಧ ವ್ಯಂಜನಗಳು.

ಕ್ ಖ್ ಗ್ ಘ್ ಚ್ ಛ್ ಜ್—ಇತ್ಯಾದಿ.

ಕೋರ್ಟ್ ಕ್ವೀನ್ ಸ್ಟೆಂಪ್ ಜೈಲ್ ಇಂಗ್ಲಾಂದ್ ಏಪ್ರಿಲ್ ಮಾಸ್ತರ್ ಸ್ಟೀಮರ್ ಕಲ್ಕಟರ್ ಮೆಜಿಸ್ಟ್ರೇಟ್ ಪೋಲೀಸ್ ಆಫೀಲ್
ಫ್ಲೈದರರ್ ಎಂಡ್ ರೀವ್ ಮಿಶನ್ ಬುಕ್ ಶಾಪ್.

---

## ಕೂಡಿಸಿದ ಮಾತುಗಳು.

| | | |
|---|---|---|
| ಬಾಳೆ ಗಿಡ | ಸಂಪಿಗೆ ಹೂವು | ತಿಗಳು ದೇಶ |
| ಜಾಲಿ ಮುಳ್ಳು | ಜಾಜಿ ಹೂವು | ಚೀನಾ ದೇಶ |

| | | |
|---|---|---|
| ನಿಂಬೆ ಹಣ್ಣು | ರಾಗಿ ಹುಲ್ಲು | ಹಂಪೆ ಪಟ್ಟಣ |
| ದ್ರಾಕ್ಷೆ ಹಣ್ಣು | ಭತ್ತದ ಹುಲ್ಲು | ಶ್ರೀರಂಗ ಪಟ್ಟಣ |
| ತೆಂಗಿನ ಕಾಯಿ | ಡೊಣ್ಣೆ ಮುಳ್ಳು | ಕನ್ನಡ ಮಾತು |
| ನುಗ್ಗೆ ಕಾಯಿ | ಈಚಲ ಮುಳ್ಳು | ಜೇನು ತುಪ್ಪ |
| ಅವರೆ ಬಳ್ಳಿ | ಮಾವಿನ ಮರ | ಕಾವೇರಿ ನದಿ |
| ಮಲ್ಲಿಗೆ ಬಳ್ಳಿ | ಹೂವಿನ ಗಿಡ | ಗಂಗಾ ನದಿ |
| ಕೆಂಪು ರಕ್ತ | ಕಪ್ಪು ಶೀರೆ | ಬಿಳೀ ಕುದುರೆ |
| ಹಳದಿ ವಸ್ತ್ರ | ನೀಲ ಕಲ್ಲು | ಹಸರು ಎಲೆ |
| ಹುಳಿ ರಸ | ಸವಿ ಸಕ್ಕರೆ | ಸಣ್ಣ ಮನೆ |
| ದೊಡ್ಡ ತೋಟ | ನೆಟ್ಟನೆ ದಾರಿ | ಸೊಟ್ಟ ಹಾದಿ |
| ಸತ್ಯ ಮಾತು | ಸುಳ್ಳು ಕಲ್ಪನೆ | ಶುದ್ಧ ಮನಸ್ಸು |
| ನಿರ್ಮಲ ಜಲ | ಒಳ್ಳೇ ಮಗನು | ಪ್ರಿಯ ತಂದೆ |
| ಶ್ರೇಷ್ಠ ಗುರು | ಬಡ ಪಾಪಿ | ಹೆಡ್ಡ ಬುದ್ಧಿ |
| ಹಗೂರ ಹೊರೆ | ಮೂರ್ಖ ಹುಡುಗ | ಗಿಡ್ಡ ಮನುಷ್ಯ |

---

| | | |
|---|---|---|
| ನನ್ನ ಕೈಯಿ | ನಿನ್ನ ಕಾಲು | ಅವನ ಮಾತು |
| ಅವಳ ಹೆಸರು | ಅದರ ಕಾರ್ಯ | ನಮ್ಮ ಸಾಲೆ |
| ನಿಮ್ಮ ಊರು | ಅವರ ನಡತೆ | ಅವುಗಳ ಲೆಖ್ಖ |
| ತನ್ನ ದೋಷ | ತಮ್ಮ ದಯ | ದೇವರ ಪ್ರೀತಿ |
| ಮನುಷ್ಯರ ಪಾಪ | ತಂದೆಯ ಚಿತ್ತ | ಪುತ್ರನ ಸಂತೋಷ |
| ಹುಡುಗರ ಪಾಠ | ಮಕ್ಕಳ ಆಟ | ತೋಟದ ಭಾವಿ |
| ರಾಯರ ಕಾಲ | ಹಿರಿಯರ ಮಾತು | ಹಾವಿನ ಹುತ್ತ |
| ಪಕ್ಷಿಯ ಗೂಡು | ಊರಿನ ಜನ | ಹೊಲದ ಬೆಳೆ |

---

| | | |
|---|---|---|
| ಬರುವ ವರುಷ | ಹೋದ ತಿಂಗಳು | ಕೇಳದ ಕಿವಿ |
| ಕೃಪೆಯುಳ್ಳ ದೇವರು | ಬಲವಾದ ಕೋಟೆ | ಲೆಖ್ಖವಿಲ್ಲದ ನಕ್ಷತ್ರಗಳು |

| | | |
|---|---|---|
| ಬುದ್ಧಿಹೀನ ಮಗನು | ಒಬ್ಬ ಬ್ರಾಹ್ಮಣನು | ಒಂದು ಕೂಸು |
| ಏಕ ದೇವರು | ಸ್ವಲ್ಪ ಮಂದಿ | ಕೆಲವು ಜನ |
| ಅನೇಕ ದೇಶಗಳು | ಹಳಬ ನಿವಾಸಿಗಳು | ಬಹಳ ತೊಂದರೆ |
| ಅಷ್ಟು ದೂರ | ಇಷ್ಟು ಹೊತ್ತು | ಎಷ್ಟು ಘಂಟೆ |
| ಸಮಸ್ತ ಜನರು | ತುಂಬ ಬೆಳೆ | ರಾಶಿ ಹಣ |

---

| | | |
|---|---|---|
| ತಂದೆ ತಾಯಿ | ಅಣ್ಣ ತಮ್ಮ | ಅಕ್ಕ ತಂಗಿ |
| ದನ ಕರು | ಹೆಂಡರು ಮಕ್ಕಳು | ಅನ್ನ ಪಾನ |
| ವಸ್ತ್ರ ಹೊದಿಕೆ | ಹೊಲ ಮನೆ | ಹೊನ್ನು ಹಣ |
| ಬದುಕು ಬಾಳು | ಮನೆ ಮಾರು | ಹಣ್ಣು ಹಂಪಲು |
| ಹಳ್ಳಿ ಪಳ್ಳಿ | ಮರವು ಸರವು | ಆಟ ಪಾಟ |
| ತಗ್ಗು ಮುಗ್ಗು | ಹಕ್ಕಿ ಪಕ್ಕಿ | ಹಬ್ಬ ಗಿಬ್ಬ |

---

## ಮೂಲ ಮಾತುಗಳಿಂದ ಹುಟ್ಟಿದ ಮಾತುಗಳು.

ಕಟ್ಟು ಕಟ್ಟೆ ಕಟ್ಟಳೆ ಕಟ್ಟಿಗೆ. ಮೋಸ ಮೋಸಗಾರ ಮೋಸಗಾರ್ತಿ. ಕಳ್ಳ ಕಳ್ಳತನ. ಕೆಂಪು ಕೆಮ್ಮಣ್ಣು ಕೆಂದವರೆ ಕೆನ್ನೆಲ ಕೆಂಧೂಳು. ಆಡು ಆಟ ಮಕ್ಕಳಾಟಿಕೆ ಆಟಗುಳಿ. ಮಾತು ಮಾತಾಳಿ. ಗಾಣ ಗಾಣಿಗನು. ಕಂಚು ಗಂಚುಗಾರನು. ಲಂಚ ಲಚವಣಿಗನು. ಹೂವು ಹೂವಡಿಗನು. ಭೋಗ ಅನುಭೋಗ ಸಂಭೋಗ ಭೋಜನ. ಚಾರ ಆಚಾರ ಆಚರ್ಯ ಪರಿಚಾರ ಪಡಿಚಾರಕ ಉಪಚಾರ ವಿಚಾರ ವಿಚಾರಣೆ ವ್ಯಭಿಚಾರ ಸಂಚಾರ ಉಚ್ಚಾರ. ಆಹಾರ ಪರಿಹಾರ ಸಂಹಾರ ಉ

ದಾಹರಣೆ. ವರ್ತಕ ವರ್ತಮಾನ ಪ್ರವರ್ತನೆ. ಯೋಗ ಪ್ರಯೋಗ ಯೋಗ್ಯ ಪ್ರಯೋಜನ. ಯುಕ್ತ ಸಂಯುಕ್ತ ವಿಯುಕ್ತ ಅಯುಕ್ತ. ಯುಗ ಯುಗಳಿ ಯೋಗಿ ಯುಗ್ಮ. ಶ್ವಾಸ ವಿಶ್ವಾಸ ಉಚ್ಛ್ವಾಸ ಅಶ್ವಾಸ. ಹಾಸ್ಯ ಹಾಸ್ಯಗಾರನು ಅಪಹಾಸಕನು.

---

ಅಭಿಪ್ರಾಯುಗಳು.

ಅಪ್ಪ ಹೇಳು. ಬಿಸಲು ಹೋಗಲಿ.
ಮಗನೇ ಕೇಳು. ತಂಪು ಬರಲಿ.
ಅವ್ವಾ ಕೊಡು. ದೇವರ ಚಿತ್ತವು ಆಗಲಿ.
ಮಗಳೇ ಬೀಸು. ಕರ್ತನ ರಾಜ್ಯವು ಬರಲಿ.

---

ಏ ಹುಡುಗ ಬಾ. ಮಾತುಗಳನ್ನು ಓದು.
ಬಾಗಲ ಮುಚ್ಚು. ಅಕ್ಷರಗಳನ್ನು ಬರೆ.
ಕಿಟಿಕಿ ತೆರಿ. ಲೆಖ್ಖಗಳನ್ನು ಮಾಡು.
ಪುಸ್ತಕ ತಾ. ಪಾಠಗಳನ್ನು ಹೇಳು.
ಕಿವಿಗಳಿಂದ ಕೇಳು. ಅಯ್ಯನಿಗೆ ಉತ್ತರ ಕೊಡು.
ಬುದ್ಧಿಯಿಂದ ತಿಳಿ. ಹಿರಿಯರಿಗೆ ಕಿವಿ ಕೊಡು.
ಜಾಗ್ರತೆಯಿಂದ ಕಲಿ. ದೇವರಲ್ಲಿ ಮನಸ್ಸಿಡು.

---

ಬೋಧಕನ ಉಪದೇಶ ಕೇಳು. ಮನಸ್ಸಿನಲ್ಲಿ ಎಣಿಸು.
ದೇವರ ವಾಕ್ಯ ಓದು. ಹೃದಯದಲ್ಲಿ ಗ್ರಹಿಸು.
ಶ್ಲೋಕಗಳ ಅರ್ಥ ವಿಚಾರಿಸು. ಆತ್ಮದಲ್ಲಿ ಅರಿ.

---

ಹುಡುಗರು ವಿದ್ಯ ಕಲಿಯ ಬೇಕು. ಮನುಷ್ಯರನ್ನು ಕೊಲ್ಲ ಬೇಡ.

ಪುರುಷರು ಕಷ್ಟ ಮಾಡ ಬೇಕು. ನೆರೆಯವರನ್ನು ಬೈ ಬೇಡ.

ಅರಸುಗಳು ರಾಜ್ಯವಾಳ ಬೇಕು. ಹೊಟ್ಟೆಕಿಚ್ಚು ಪಡ ಬೇಡ.

ಎಲ್ಲರು ಸಾಯ ಬೇಕು. ಸುಮ್ಮನೆ ಅಳ ಬೇಡ.

---

ನಾನು ಓದ ಬಹುದು. ಕಳ್ಳತನ ಮಾಡ ಬಾರದು.

ನೀನು ಬರೆಯ ಬಹುದು. ಸುಳ್ಳು ಹೇಳ ಬಾರದು.

ನಾವು ಹೋಗ ಬಹುದು. ಸಾಲೆಯಲ್ಲಿ ಆಡ ಬಾರದು.

ನೀವು ಸಾಲೆಯಲ್ಲಿ ನಿಲ್ಲ ಬಹುದು. ಆಲಸ್ಯದಿಂದಿರ ಬಾರದು.

---

ನಾನು ಸಾಲೆಯಲ್ಲಿದ್ಧೇನೆ.
ನಾನು ಚಿಕ್ಕ ಹುಡುಗನಾಗಿರುತ್ತೇನೆ.
ನೀನು ನನ್ನ ಹತ್ತರ ಇದ್ಧೀ.
ನೀನು ನನ್ನ ಸ್ನೇಹಿತನಾಗಿರುತ್ತೀ.
ಅವನು ಪ್ರಯಾಣಕ್ಕೆ ಹೋಗಿದ್ಧಾನೆ.
ದೇವರು ಎಲ್ಲಿಯೂ ಇರುತ್ತಾನೆ.
ತಾಯಿಯು ಮನೆಯಲ್ಲಿದ್ಧಾಳೆ
ಆಕೆ ಒಳ್ಳೆಯವಳಾಗಿರುತ್ತಾಳೆ.
ಮೋಡದಲ್ಲಿ ಸಿಡಿಲು ಅದೆ.

ಮರದಲ್ಲಿ ಪಕ್ಷೀ ಗೂಡು ಇರುತ್ತದೆ.
ನಾವು ವಿದ್ಯ ಕಲಿಯುತ್ತಾ ಇದ್ಧೇವೆ.
ನಾವೆಲ್ಲರೂ ಪಾಪಿಷ್ಠರಾಗಿರುತ್ತೇವೆ.
ನೀವು ಬರೆಯುತ್ತಾ ಇದ್ಧೀರಿ.
ನೀವು ನಮ್ಮ ಕೂಡಾ ಇರುತ್ತೀರಿ.
ಒಕ್ಕಲಿಗರು ಹೊಲದಲ್ಲಿ ಇರುತ್ತಾರೆ.
ಮನುಷ್ಯರು ದೇವರ ಕೈಯಲ್ಲಿರುತ್ತಾರೆ.
ಹೆಂಗಸರು ಅಡಿಗೆ ಮಾಡುತ್ತಾರೆ.
ಹೆಂಣು ಮಕ್ಕಳು ತೋಟದಲ್ಲಿ ಆಡುತ್ತಾರೆ.
ನಕ್ಷತ್ರಗಳು ಆಕಾಶದಲ್ಲಿ ಅವೆ.
ಅಡವಿಯಲ್ಲಿ ಕಾಡ ಮೃಗಗಳು ಇರುತ್ತವೆ.

---

ನಾನು ವಿದ್ಯಾಭ್ಯಾಸವನ್ನು ಮಾಡುತ್ತೇನೆ.
ನೀನು ನಿನ್ನ ಹಲಿಗೆಯ ಮೇಲೆ ಲೆಖ್ಖ ಮಾಡುತ್ತೀ.
ನನ್ನ ತಂದೆಯು ಊರಲ್ಲಿ ಕುಟುಂಬ ಸಂರಕ್ಷಣೆ ಮಾಡುತ್ತಾನೆ.
ನನ್ನ ತಾಯಿಯು ಮನೆಯಲ್ಲಿ ಕೆಲಸ ಮಾಡುತ್ತಾಳೆ.
ಕೂಸು ತಂದೆ ತಾಯಿಗಳಿಗೆ ಉಪದ್ರ ಮಾಡುತ್ತದೆ.
ನಾವು ದೇವರಿಗೆ ವಿರೋಧವಾಗಿ ಬಹಳ ಪಾಪ ಮಾಡುತ್ತೇವೆ.
ನೀವು ನಮ್ಮ ಹಾಗೆ ಪ್ರತಿ ದಿನವೂ ತಪ್ಪು ಮಾಡುತ್ತೀರಿ.

ತಂದೆ ತಾಯಿಗಳು ನಮಗೆ ಬಹಳ ಉಪಕಾರ ಮಾಡು ತ್ತಾರೆ.
ಮುಳ್ಳುಹಂದಿಗಳು ತೋಟವನ್ನು ಹಾಳು ಮಾಡುತ್ತವೆ.

---

ಆಟದಲ್ಲಿ ಒಬ್ಬನು ಗೆಲ್ಲುತ್ತಾನೆ.
ಅವನು ನಗುತ್ತಾನೆ.
ಸಂತೆಯಲ್ಲಿ ಒಬ್ಬನು ಮಾರುತ್ತಾನೆ.
ಈತನು ತಕ್ಕ ಕ್ರಯ ಕೊಡ ಬೇಕು.
ಬೇರೊಬ್ಬನು ಸೋಲುತ್ತಾನೆ.
ಇವನು ಅಳುತ್ತಾನೆ.
ಮತ್ತೊಬ್ಬನು ಕೊಳ್ಳುತ್ತಾನೆ.
ಆತನು ಮೋಸ ಮಾಡ ಬಾರದು.

---

ಕೆಟ್ಟ ಹುಡುಗರು ಸುಮ್ಮನೆ ಒಬ್ಬರ ಸಂಗಡ ಒಬ್ಬರು ಜಗಳವಾಡುತ್ತಾರೆ.
ಅವರು ಹೊಟ್ಟೆಕಿಚ್ಚಿನಿಂದ ಒಬ್ಬರನ್ನೊಬ್ಬರು ಹೊಡೆಯುತ್ತಾರೆ.
ಹೀಗೆ ಇರ ಬಾರದು. ನಾವು ಒಬ್ಬರನ್ನೊಬ್ಬರು ಪ್ರೀತಿ ಮಾಡ ಬೇಕು.

---

ಪ್ರಶ್ನೆಗಳು.

ಯಾವನು ಜಗತನ್ನು ಆಳುತ್ತಾನೆ?
ಯಾವನಿಗೆ ಸರ್ವತ್ರಾಣವು ಇರುತ್ತದೆ?

ಯಾವನ ಸಿಂಹಾಸನವು ಪರಲೋಕದಲ್ಲಿ ಅದೆ?
ಯಾವನನ್ನು ಎಲ್ಲಕ್ಕಿಂತ ಹೆಚ್ಚಾಗಿ ಸ್ನೇಹಿಸ ಬೇಕು?
ಯಾವನಿಂದ ಈ ಲೋಕ ಉಂಟಾಯಿತು?
ಯಾವನಲ್ಲಿ ದೋಷವಿಲ್ಲ?
ಓ ನಮ್ಮ ದೇವರೇ ನೀ ಎಂಥವನೋ?

---

ಮನುಷ್ಯರಿಗೂ ಮೃಗಗಳಿಗೂ ಹೆಚ್ಚು ಕಡಿಮೆ ಏನದೆ?
ಮೂರ್ಖ ಹುಡುಗರಿಗೆ ಏನು ಮಾಡ ಬೇಕು?
ಔಷಧ ಯಾತಕ್ಕೆ ಬೇಕು?
ರೋಗ ಯಾವದರಿಂದ ಬರುತ್ತದೆ?
ಕಷ್ಟ ಯಾವದರ ಫಲವು?
ಬೋಧಕರು ಯಾವದರಲ್ಲಿ ಸಂತೋಷ ಪಡುತ್ತಾರೆ?
ದುಷ್ಟರ ಗತಿ ಯಾವದೋ?

---

ಯಾವ ಅರಸನಿಗೆ ಎಲ್ಲಾ ಅರಸುಗಳು ಒಳಗಾಗಿರುತ್ತಾರೆ?
ಯಾವ ದೀಪವು ಮನುಷ್ಯರೆಲ್ಲರಿಗೆ ಬೆಳಕು ಕೊಡುತ್ತದೆ?
ಎಲ್ಲಾ ವಿದ್ಯೆಗಳಲ್ಲಿ ಶ್ರೇಷ್ಟವಾದ ವಿದ್ಯೆ ಯಾವದು?
ಒಳ್ಳೇ ಹುಡುಗರಿಗೆ ಉತ್ತಮವಾದ ಸ್ನೇಹಿತರು ಯಾರು?
ಎಂಥಾ ಮಗನಲ್ಲಿ ತಂದೆಯು ಸಂತೋಷ ಪಡುತ್ತಾನೆ?
ಎಂಥಾ ಮಗಳು ತಾಯಿಗೆ ದುಖ್ಖ ಪಡಿಸುತ್ತಾಳೆ?

---

ನಮಗೆ ಉಪಕಾರ ಮಾಡುವವರು ಯಾರೋ ಅವರಲ್ಲಿ ಪ್ರೀತಿ ಇಡುತ್ತೇವೆ.

ನಿನ್ನ ಸ್ನೇಹಿತರು ಎಂಥವರೋ ಅಂಥವನು ನೀನೇ.

ಆಕಾಶದಲ್ಲಿ ಎಷ್ಟು ನಕ್ಷತ್ರಗಳೋ ಸಮುದ್ರದಲ್ಲಿ ಎಷ್ಟು ನೀರೊ.

ಎಷ್ಟು ಸುಖವು ಪರಲೋಕದಲ್ಲ್ಯೊ ಅಷ್ಟು ಶ್ರಮವು ನರಕದಲ್ಲಿ.

ಎಷ್ಟು ಸರ್ತಿ ನಾಡಿ ಹೊಡೆಯುತ್ತದೆಯೋ ಅಷ್ಟು ಸರ್ತಿ ದೇವರನ್ನು ಸ್ಮರಿಸು.

---

ಕಲ್ಲು ನೋಡ ಬಲ್ಲುದೆ? ಕೊರಡು ನಡೆಯ ಬಲ್ಲುದೆ?

ಮೂರ್ತಿಗಳು ಮಾತಾಡ ಬಲ್ಲವೆ? ವಿಗ್ರಹಗಳು ಕೇಳ ಬಲ್ಲವೆ?

---

ಮೂಢ ಬಲ್ಲನೆ ಜ್ಞಾನ ದೃಢ ಭಕ್ತಿಯ?
ಕಾಡ ಕಪಿ ಬಲ್ಲುದೆ ಮಾಣಿಕದ ಬೆಲೆಯ?
ಕೋಣ ಬಲ್ಲುದೆ ವೇದವನ್ನೋದಿ ಪಠಿಸಲಿಕ್ಕೆ?

---

ಗೋಣಿ ಬಲ್ಲುದೆ ಎತ್ತಿನ ಸುಖ ದುಃಖವ?
ಹಾವಿನ ಮರಿ ತಂದು ಹಾಲೆರದು ಸಾಕಿದರೆ,
ಬಾಯಿಯೊಳಗಣ ವಿಷವ ಬಿಡ ಬಲ್ಲುದೆ?

---

ಮನುಷ್ಯರಲ್ಲಿ ನಿರ್ಮಲ ನಡತೆ ಉಂಟೇ?
ಮೈಗಳ್ಳರಿಗೆ ಕೂಲಿ ಬೇಕೋ?
ದೇವರಲ್ಲಿ ಸುಳ್ಳು ಉಂಟೋ?
ದುಷ್ಟರಿಗೆ ಶಿಕ್ಷೆ ಬೇಡವೋ?

---

ನೀನು ಸಮುದ್ರದ ನೀರನ್ನು ಶೇರಿನಿಂದ ಅಳಿಯ ಬಹುದೋ?
ನೀನು ದೇವರ ಆಲೋಚನೆಗಳನ್ನು ನಿನ್ನ ಬುದ್ಧಿಯಿಂದ ಗ್ರಹಿಸ ಬಹುದೋ?
ಮುಳ್ಳು ಗಿಡಗಳು ದ್ರಾಕ್ಷೆಯ ಫಲಗಳನ್ನು ಫಲಿಸುವವೋ?
ಕೆಟ್ಟ ಮನಸ್ಸಿನಿಂದ ಉತ್ತಮ ಕ್ರಿಯೆಗಳು ಹುಟ್ಟುವವೋ?
ಸೂರ್ಯನು ಮೂಡಿದಾಗ ಕತ್ತಲೆ ಓಡಿ ಹೋಗುವದಿಲ್ಲವೋ?
ಜ್ಞಾನದ ಬೋಧನೆಯಿಂದ ಮನಸ್ಸಿಗೆ ಬೆಳಕಾಗುವದಿಲ್ಲವೋ?

---

## ಕಾಲವಿಶೇಷಗಳು

ಈಗ ನಾನು ಸಣ್ಣ ಹುಡುಗನಾಗಿರುತ್ತೇನೆ.
ಕೆಲವು ವರುಷಗಳ ಹಿಂದೆ ನಾನು ಕೂಸಾಗಿದ್ದೆನು.
ಮೂವತ್ತು ವರ್ಷಗಳ ಮೇಲೆ ನಾನು ಪ್ರಾಯಸ್ಥನಾಗಿರುವೆನು.

ಇಂದು ನೀನು ಶಾಲೆಯಲ್ಲಿರುತ್ತೀ.

ಒಂದು ತಿಂಗಳಿನ ಹಿಂದೆ ತಂದೇ ಮನೆಯಲ್ಲಿ ಆಡುತ್ತಾ ಇದ್ದಿ.

ಇನ್ನು ಮುಂದೆ ಒಳ್ಳೇ ಬುದ್ಧಿಗಳನ್ನು ಕಲಿಯುತ್ತಾ ಇರುವಿ.

---

ದೇವರು ಒಬ್ಬನೇ ಆದಿ ಅಂತ್ಯವಿಲ್ಲದವನಾಗಿರುತ್ತಾನೆ.

ಆತನು ಈ ಲೋಕವು ಉತ್ಪತ್ತಿಯಾಗುವ ಮೊದಲು ಇದ್ದನು.

ಆತನು ಸದಾಕಾಲವು ಇರುವನು.

---

ತಾಯಿಯು ಮನೇ ಕೆಲಸವನ್ನು ನೋಡುತ್ತಾ ಇರುತ್ತಾಳೆ.

ಅವಳು ಮೊನ್ನೆ ತನ್ನ ನೆಂಟರ ಹತ್ತರ ಹೋಗಿದ್ದಳು.

ನಮಗೆ ಬುದ್ಧಿ ಬಂದರೆ ಅವಳು ಸಂತೋಷದಿಂದ ಇರುವಳು.

---

ಭೂಲೋಕದಲ್ಲಿ ಎರಡು ಭಾಗ ನೀರು ಒಂದು ಭಾಗ ನೆಲ ಇರುತ್ತದೆ.

ಪೂರ್ವದಲ್ಲಿ ಎಲ್ಲಾ ಭೂಮಿಯ ಮೇಲೆ ನೀರು ಇತ್ತು.

ಕಡೆಯಲ್ಲಿ ಭೂಮಿ ಎಲ್ಲಾದರ ಮೇಲೆ ದೊಡ್ಡ ಬೆಂಕಿ ಇರುವದು.

---

ನಾವು ಈಗ ಶಾಲೆಯಲ್ಲಿ ಕಲಿಯುತ್ತಾ ಇರುತ್ತೇವೆ.
ನಿನ್ನೆ ಸಾಯಂಕಾಲದಲ್ಲಿ ಬೀದಿಯಲ್ಲಿ ಆಡುತ್ತಾ ಇದ್ದೆವು.
ನಾಳೆ ಪರೀಕ್ಷೆಗೋಸ್ಕರ ಧೊರೇ ಮನೆಗೆ ಹೋಗುತ್ತಾ ಇರುವೆವು.

---

ನೀವು ಈಗಲೇ ಸುಖದಿಂದಿರುತ್ತೀರಿ.
ಕೆಲವು ವರ್ಷಗಳ ಹಿಂದೆ ಸುಖ ದುಃಖ ತಿಳಿಯದೆ ಇದ್ದಿರಿ.
ಭಕ್ತಿಯಿಂದಿದ್ದರೆ ನಿತ್ಯವಾಗಿ ಸುಖದಿಂದ ಇರುವಿರಿ.

---

ಈಗಿನ ಕಾಲದಲ್ಲಿ ನೂರು ಕೋಟಿ ಮನುಷ್ಯರು ಭೂಮಿಯ ಮೇಲೆ ಇರುತ್ತಾರೆ.
ಆರಂಭದಲ್ಲಿ ಇಬ್ಬರು ಮಾತ್ರ ಇದ್ದರು.
ಕಡೇ ದಿನದಲ್ಲಿ ಎಲ್ಲಾ ಮನುಷ್ಯರು ಕೂಡಿ ಎಷ್ಟು ಮಂದಿ ಇರುವರು?

---

ಮನುಷ್ಯರೊಳಗೆ ಗುಣ ಗತಿಗಳ ಭೇದಗಳು ಇರುತ್ತವೆ.
ಭಕ್ತರೂ ಭಕ್ತಿಹೀನರೂ ಎಂಬ ಭೇದವು ಪೂರ್ವದಿಂದಲೇ ಇತ್ತು.
ಅವರ ಗುಣಗಳಿದ್ದ ಹಾಗೆ ಅವರ ಗತಿಗಳು ಇರುವವು.



ನಾನು ಅಕ್ಷರ ಬರೆಯುತ್ತೇನೆ.
ನೀನು ಪುಸ್ತಕ ಓದುತ್ತೀ.
ಒಕ್ಕಲಿಗನು ಗದ್ದೆ ಉಳುತ್ತಾನೆ.
ಅವಳು ಹತ್ತಿ ನೂಲುತ್ತಾಳೆ.
ಕೂಸು ನಿದ್ರೆ ಗೈಯುತ್ತದೆ.
ನಾವೆಲ್ಲರು ಅಯ್ಯನ ಮಾತು ಕೇಳುತ್ತೇವೆ.
ನೀವು ಧೊರೇ ಮನೆಗೆ ಹೋಗುತ್ತೀರಿ.
ಊರಿನವರು ಪೈರು ಕೊಯ್ಯುತ್ತಾರೆ.
ಬಡ ಹೆಂಗಸರು ಹಕ್ಕಲಾಯುತ್ತಾರೆ.
ಎತ್ತುಗಳು ಕಣ ತುಳಿಯುತ್ತವೆ.

---

ನಾನು ಮೊದಲು ಶಾಲೆಗೆ ಬಂದೆನು.
ನೀನು ಎಲ್ಲರಿಗೂ ಹಿಂದೆ ಬಂದಿ.
ನಿನ್ನೆ ಒಬ್ಬನು ಹೊಸದಾಗಿ ಶೇರಿದನು.
ತಾಯಿ ರೊಟ್ಟಿಯನ್ನು ಕೊಟ್ಟಳು.
ಮೊನ್ನೆ ದೊಡ್ಡ ಮಳೆ ಬಿತ್ತು.
ನಿನ್ನೆ ಒಳ್ಳೇ ಆಟ ಆಡಿದೆವು.
ನೀವು ತಿರುಗಾಡಲಿಕ್ಕೆ ಹೋದಿರಿ.
ಧೊರೆಗಳು ಪುಸ್ತಕ ಕೊಟ್ಟರು.
ಕಳ್ಳರು ರಾತ್ರಿಯಲ್ಲಿ ಕನ್ನ ಕೊರೆದರು.
ರಾತ್ರಿಯಲ್ಲಿ ನರಿಗಳು ಕೂಗಿದವು.

---

ನಾನು ನಿನಗೆ ಪುಸ್ತಕವನ್ನು ಕೊಟ್ಟೇನು.
ಅಭ್ಯಾಸ ಮಾಡಿದರೆ ಅದನ್ನು ಚನ್ನಾಗಿ ಗ್ರಹಿಸೀ.
ಚಿಕ್ಕ ಪ್ರಾಯದಲ್ಲಿ ಕಲಿತವನು ಬುದ್ಧಿವಂತನಾದಾನು.
ಅವಳು ಒಳ್ಳೆಯವಳು, ಧರ್ಮವನ್ನು ಕೊಟ್ಟಾಳು.
ಆ ಹಸು ಒಂದು ಶೇರು ಹಾಲನ್ನು ಕೊಟ್ಟೀತು.
ನಾವು ಓದಿದ್ದರಲ್ಲಿ ಪರೀಕ್ಷೆ ಕೊಟ್ಟೇವು.
ಪಾಪದ ಫಲವನ್ನು ಉಂಡೀರಿ.
ದುಷ್ಟರು ತಾವೇ ಅಗಿದ ಕುಣಿಯಲ್ಲಿ ಬಿದ್ದಾರು.
ಆ ಪಕ್ಷಿಗಳು ನಮ್ಮ ಶಬ್ದವನ್ನು ಕೇಳಿ ಹಾರಿ ಹೋದಾವು.



ಗಾದೆಗಳು.

ತಾಳಿದವ ಬಾಳ್ಯಾನು.
ಬೀಜದ ಹಾಗೆ ಫಲ ಶಿಕ್ಕುವದು.
ರೊಟ್ಟಿಗೆ ಬಂದ ನಾಯಿ ತುಪ್ಪಕ್ಕೆ ಬಂದೀತೇ?
ಹಂದಿಗೆ ಎಷ್ಟು ತೊಳೆದರೂ ಕೆಸರಿನಲ್ಲಿ ಬೀಳುವದು ಬಿಟ್ಟೀತೇ?
ಇಡೀ ಮುಳುಗಿದ ಮೇಲೆ ಛಳಿ ಉಂಟೇ?
ಹೊಸ ವೈದ್ಯನಿಗಿಂತ ಹಳೆ ರೋಗಿ ವಾಶಿ.
ಗಿಡವಾಗಿ ಬೊಗ್ಗದ್ದು ಮರವಾಗಿ ಬೊಗ್ಗೀತೇ?

ಹೊಳೇ ಪರಿಯಂತ್ರ ಓಟ, ಥೊರೇ ಪರಿಯಂತ್ರ ದೂರು.

ಕೆಟ್ಟ ಮೇಲೆ ಬುದ್ಧಿ ಬರೋದು, ಅಟ್ಟ ಮೇಲೆ ಒಲೆ ಉ
ರೋದು.

ಕುಂಬಾರಗೆ ವರ್ಷ, ದೊಣ್ಣೆಗೆ ನಿಮಿಷ.

ತಾಗದೆ ಬಾಗದು, ಬಿಸಿಯಾಗದೆ ಬೆಣ್ಣೆ ಕರಗದು.

ಗೋವು ಕಪ್ಪಾದರೆ, ಹಾಲು ಕಪ್ಪೇ?

ಬಾಯಾರಿದಾಗ ಭಾವಿ ತೋಡಿದ ಹಾಗೆ.

ಹಾವು ಮುಪ್ಪಾದರೆ, ವಿಷ ಮುಪ್ಪೇ?

ಅಳಿದ ಊರಿಗೆ ಉಳಿದವನೇ ಗೌಡ.

ಗುರುವಿನಂತೆ ಶಿಷ್ಯ, ತಂದೆಯಂತೆ ಮಗ.

ಬೆಳಿಯುವ ಪೈರು ಮೊಳೆಯಲ್ಲೇ ಕಾಣುವದು.

ಚಿಂತೆಯೇ ಮುಪ್ಪು, ಸಂತೋಷವೇ ಯೌವನ.

ಊಟ ಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜ
ಗಳವಿಲ್ಲ.

ಸಹಸ್ರ ಚಿತ್ತಾರವನ್ನು ಒಂದು ಮಸಿ ನುಂಗಿತು.

ಕಡ ಹುಟ್ಟಿ ಬಡವ ಕೆಟ್ಟ.

ಹೋದರೆ ಒಂದು ಕಲ್ಲು, ಬಂದರೆ ಒಂದು ಹಣ್ಣು.

ಕೋಣ ಬೆಳದರೆ, ಆನೆಯಾದೀತೇ?

ಸಮಯಕ್ಕೆ ಒದಗಿದವನೇ ನೆಂಟ, ಕೆಲಸಕ್ಕೆ ಒದಗಿದವನೇ
ಬಂಟ.

ಬತ್ತಿ ನೂಕಲಾರದ ಬಂಟ ದಳ ನಡಿಸ್ಯಾನೇ?



## ಕಥೆಗಳು.

### ೧. ಎಲ್ಲಾ ಜನರಿಗೆ ಮೆಚ್ಚಿಸ ಕೂಡದು.

ಒಂದು ಗ್ರಾಮದಲ್ಲಿರುವ ಪರತಂತ್ರ ಬುದ್ಧಿಯುಳ್ಳ ಒಬ್ಬ ಒಕ್ಕಲಿಗನು ತನ್ನಲ್ಲಿರುವ ಒಂದು ಕುದುರೇ ತಟ್ಟನ್ನು ಮಾರುವದಕ್ಕೆ ಸಮೀಪವಾದ ಪಟ್ಟಣದ ಪೇಟೆಗೆ ಹೋಗ ಬೇಕೆಂದು ಬೆಳಿಗ್ಯೆ ಮಗನಿಗೆ ಕರೆದು, ಆ ತಟ್ಟುವಿಗೆ ಕಡಿವಾಣ ಕಟ್ಟಿ, ಸಿದ್ಧ ಮಾಡಿಸಿ, ಅದರ ಮೇಲೆ ತಾನು ಕೂತು ಕೊಂಡು, ಹುಡುಗನಾದ ಮಗನಿಗೆ ಹಿಂದೆ ಹೊಡದು ಕೊಂಡು, ಬಾ ಎಂದು ಹೇಳಿ, ಹೊರಟನು. ಸ್ವಲ್ಪ ದೂರ ಹೋದಾಗ, ಎದುರಾಗಿ ಬರುವ ಒಬ್ಬನು ಇವನನ್ನು ನೋಡಿ,—ಎಲೇ ಒಕ್ಕಲಿಗನೇ, ನೀ ಏನು ಮಾಡಿದಿ? ಎಳೇ ಪ್ರಾಯದ ಮಗನನ್ನು ಇಂಥಾ ಕರಕಲಾದ ಮಾರ್ಗದಲ್ಲಿ ನಡಿಸಿ, ತ್ರಾಣವಂತನಾದ ನೀನು ತಟ್ಟಿನ ಮೇಲೆ ಏರಿದ್ಯಾ? ಮಗನ ಮೇಲೆ ಕರುಣವಿಲ್ಲವೋ? ಎಂದನು. ಈ ಒಕ್ಕಲಿಗನು ಆ ಮಾತು ಸರಿ ಎಂದು ತಿಳು ಕೊಂಡು, ತಾನು ಕೆಳಗೆ ಇಳಿದು, ಮಗನನ್ನು ಏರಿಸಿ, ಹಿಂದೆ ನಡೆದು ಹೋದನು. ಸ್ವಲ್ಪದೂರ ಹೋದಾಗ್ಯೆ ಅಲ್ಲಿರುವ ಒಬ್ಬನು ಇವರನ್ನು ನೋಡಿ,—ಎಲೇ ದಡ್ಡನೇ, ಮುದುಕನಾದ ತಂದೆಯನ್ನು ಕಾಲು ಹಾದಿ ನಡಿಸಿ, ತ್ರಾಣ ಉಳ್ಳ ನೀನು ತಟ್ಟಿನ ಮೇಲೆ ಕೂತು ಕೊಳ್ಳುವದು ಸಮವೋ? ಎಂದನು. ಆ ಒಕ್ಕಲಿಗನು ಈ ಮಾತು ಕೇಳಿ, ಓಹೋ ನಾನು ನಡದರೂ ಸಮವಲ್ಲ, ಹುಡುಗ ನಡದರೂ ಸಮವ

ಲ್ಲ, ಇಬ್ಬರೂ ಕೂತು ಕೊಳ್ಳುವ ಎಂದು ಹೇಳಿ, ಇಬ್ಬರೂ ಕುಳಿತರು. ಹೀಗೆ ಸ್ವಲ್ಪ ದೂರ ನಡದ ಮೇಲೆ ಮಾರ್ಗಸ್ಥರಾದ ಕೆಲವರು ಮಧ್ಯ ಮಾರ್ಗದಲ್ಲಿ ಇವರಿಗೆದುರಾಗಿ ನಿಂತು,—ಎಲೇ ನಿಷ್ಕರುಣಿಯಾದ ವೃದ್ಧನೇ, ಈ ಚಿಕ್ಕ ತಟ್ಟುವನ್ನು ಹೀಗೆ ದಣಿಸುವದು ಸಮವೋ? ಡೊಳ್ಳಾದ ನೀನು ಈ ಸಣ್ಣ ತಟ್ಟಿನ ಮೇಲೆ ಕೂತು ಕೊಂಡು, ನಿನ್ನ ಭಾರ ಸಾಲದೆಂದು ದಡ್ಡನಾದ ನಿನ್ನ ಮಗನನ್ನು ಸಹ ಏರಿಸುವದು ಪಾಪವಲ್ಲವೋ? ಎಂದರು. ಅದಕ್ಕೆ ಆ ಒಕ್ಕಲಿಗನು—ಒಹೋ, ಇದೂ ಆಗಲಿಲ್ಲವೆಂದು ನೆಟ್ಟುಸುರಿನಿಂದ ಕೆಳಗಿಳಿದು, ಮಗನನ್ನೂ ಇಳಿಸಿ, ಆ ತಟ್ಟನ್ನು ಮುಂದೆ ಹೊಡದು, ಅದರ ಹಿಂದೆ ಮಗನ ಕೈ ಹಿಡಿದು ನಡೆದನು. ಇನ್ನು ಮುಂದೆ ಹೋದಾಗ ಒಬ್ಬನು ನೋಡಿ, ಹಾಹಾ ಎಂದು ನಕ್ಕು,—ಈ ತಟ್ಟು ಬಹಳ ಪುಣ್ಯಾವುಳ್ಳದ್ದು, ಇದರ ಮೇಲೆ ಏರುವವನು ಯಾವನೂ ಇಲ್ಲ, ಹಿಂದೆ ಬಾಲ ಹಿಡಿದು ಸೇವಕರಂತೆ ಇಬ್ಬರು ನಡೆಯುತ್ತಾರೆ, ಎಂದನು. ಆ ಮಾತು ಇವನು ಕೇಳಿ, ಬಹಳ ವ್ಯಸನ ಪಟ್ಟು,—ಹ್ಯಾಗೂ ಸಮವಲ್ಲ, ನಾನು ಕೂತರೂ ಹುಡುಗ ಕೂತರೂ ಇಬ್ಬರೂ ಕೂತರೂ ಇಬ್ಬರೂ ನಡೆದರೂ ಏನೂ ಸಮವಾಗಲಿಲ್ಲವೆಂದು, ಕುದುರೇ ಕಾಲುಗಳನ್ನು ಕಟ್ಟಿ, ಒಂದು ಬಿದರ ತುಂಡು ತಂದು, ಅದರ ಕಾಲುಗಳ ಮಧ್ಯದಲ್ಲಿ ಶೇರಿಸಿ, ಅದನ್ನು ಇಬ್ಬರೂ ಹೊತ್ತು ಕೊಂಡು ಹೋದರು. ಅಷ್ಟರೊಳಗೆ ಪಟ್ಟಣದ ಸಮೀಪಕ್ಕೆ ಬಂದು, ಅಗಳತೆಯ

ಸಂಕ ದಾಟುವಾಗ್ಯೆ, ಹೆಬ್ಬಾಗಲಿನಿಂದ ಬರುವ ಜನರು— ಇಲ್ಲಿ ಇಬ್ಬರು ಹುಚ್ಚರು ಕುಂಡ್ರುವ ತಟ್ಟು ಕಟ್ಟಿ ಹೊತ್ತು ಕೊಂಡು ಬಂದಿದ್ಧಾರೆಂದು ಕೂಗಿ, ಗದ್ದಲ ಮಾಡಿದರು. ಆ ಮಾತು ಕೇಳಿ, ಒಕ್ಕಲಿಗನು ಕಂಗಾಲಾಗಿ, ಮುಂದಗಡೆ ಹೊತ್ತು ಕೊಂಡ ಹುಡುಗನಿಗೆ ಕರೆದು,—ಮಗನೇ, ಈ ದುಷ್ಟ ಮೃಗ ನಾಶವಾಗಲಿ; ಇದರಿಂದ ನಾವು ಅಪಹಾಸ್ಯಕ್ಕೆ ಗುರಿಯಾದೆವು ಎಂದು, ರೋಷ ಉಳ್ಳವನಾಗಿ ಆ ತಟ್ಟನ್ನು ಮುಳುಗಿಸಿದನು. ಹೀಗೆ ಅವರು ತಟ್ಟೂ ಇಲ್ಲದೆ ಹಣವೂ ಇಲ್ಲದೆ ಮನೆಗೆ ತಿರಿಗಿ ಬಂದರು.

---

## ೨. ಮುಯ್ಯಿಗೆ ಮುಯ್ಯಿ ಮಾಡ ಬಾರದು.

ಮುಸಲಮಾನರ ರಾಜ್ಯದಲ್ಲಿ ಒಬ್ಬ ಐಶ್ವರ್ಯವಂತನಾದ ತುರುಕನು ಇದ್ದನು. ಅವನು ಒಂದು ದಿವಸ ತನ್ನ ಬಳಿಗೆ ಬೇಡ ಬಂದ ದರಿದ್ರನಿಗೆ ಭಿಕ್ಷವನ್ನು ಕೊಡದೆ, ಅವನನ್ನು ಬೈದು ಹೊರಗೆ ದೊಬ್ಬಿ ಕಲ್ಲೆಸೆದನು. ಆ ದರಿದ್ರನು ಆ ಕಲ್ಲನ್ನು ತೆಗದು, ತನ್ನ ಚೀಲದಲ್ಲಿಟ್ಟು ಕೊಂಡು, ಆ ಭಾಗ್ಯವಂತನಿಗೆ ಅದೇ ಕಲ್ಲನ್ನು ಎಸೆಯ ಬೇಕೆಂಬ ಆಲೋಚನೆಯಲ್ಲಿ ಎರಡು ವರ್ಷ ಪರಿಯಂತ್ರ ಸಮಯವನ್ನು ಹುಡುಕುತ್ತಿರಲು, ಒಂದು ದಿವಸ ಆ ಭಾಗ್ಯವಂತನು ತನ್ನಿಂದ ಮಾಡಲ್ಪಟ್ಟ ಅಪರಾಧಕ್ಕೋಸ್ಕರ ಕತ್ತೇ ಮೇಲೆ ಕೂತು, ಪೇಟೇ ಮೆರವಣಿಗೆ ಮಾಡಿಸಿ ಕೊಳ್ಳುತ್ತಿದ್ದನು. ಆ ಸಮಯದಲ್ಲಿ ದರಿದ್ರನು ಅವನಿಗೆ

ಎಸೆಯುವದಕ್ಕೆ ತನ್ನ ಚೀಲದಲ್ಲಿದ್ದ ಕಲ್ಲನ್ನು ತೆಗೆಯು ವಾಗ, "ತಮ್ಮ ಶಿಟ್ಟನ್ನು ಶಾಂತ ಪಡಿಸಿ, ವಿರೋಧಿಗಳಿಗೆ ಮನ್ನಿಸಿ, ಶತ್ರುಗಳಿಗೆ ಉಪಕಾರ ಮಾಡುವವರಿಗೆ ಮುಕ್ತಿಯು ಉಂಟಾಗುವದು" ಎಂಬ ವಚನವು ಅವನ ನೆನಪಿಗೆ ಬಂತು. ಆ ಕ್ಷಣದಲ್ಲಿ ಅವನು ಕಲ್ಲನ್ನು ಬಿಸಾಟು, ಮನೆಗೆ ಹೋದನು. ಅದೇ ಪ್ರಕಾರ ಯೇಸು ಕ್ರಿಸ್ತನು ಹೇಳುವದೇನಂದರೆ: ನಿಮ್ಮ ಶತ್ರುಗಳನ್ನು ಸ್ನೇಹಿಸಿರಿ. ನಿಮಗೆ ಅನ್ಯಾಯ ಮಾಡುವವರಿಗೋಸ್ಕರ ಬೇಡಿ ಕೊಳ್ಳಿರಿ. ನಿಮ್ಮನ್ನು ಹೇಸುವವರಿಗೆ ಉಪಕಾರ ಮಾಡಿರಿ. ನೀವು ಕೋಪಿಸುವ ಕಾಲದಲ್ಲಿ ಸೂರ್ಯನು ಅಸ್ತಮಾನವಾಗದಿರಲಿ.

---

## ೩. ಮಕ್ಕಳನ್ನು ತಾಯಿ ನೋಡದೆ ಇದ್ದಾಗ್ಯೂ ದೇವರು ನೋಡುತ್ತಾನೆ.

ಒಂದು ಊರಿನಲ್ಲಿ ಒಬ್ಬ ದರಿದ್ರಳು ಮುಂದೆಯನ್ನು ಕಾಯುತ್ತಿದ್ದಳು. ಅವಳಿಗೆ ಒಂದು ಕೂಸು ಇತ್ತು. ಅವಳು ಒಂದು ದಿವಸ ಅಡವಿಯಲ್ಲಿ ಮುಂದೆಯನ್ನು ಕಾಯುತ್ತಲೂ ಕಂಚಿನ ಪಾತ್ರೆಯಲ್ಲಿರುವ ಗಂಜಿಯನ್ನು ಮರದ ಸವುಟಿನಲ್ಲಿ ತೆಗದು, ತನ್ನ ಕೂಸಿಗೆ ಕುಡಿಸುತ್ತಲೂ ಇರುವ ಸಮಯದಲ್ಲಿ ದನಗಳಲ್ಲಿ ಕೆಲವು ಮೇಪಿಗೂ ನೆರಳಿಗೂ ಸ್ವಲ್ಪ ದೂರ ಹೋದದ್ದನ್ನು ನೋಡಿ, ಅಡವಿಯ ತೋಳಗಳು ಅವುಗಳನ್ನು ಕಚ್ಚಿ ಬಿಟ್ಟಾವೆಂಬ ಭಯ

ದಿಂದ ಆ ಸವುಟನ್ನೂ ಗಂಜಿಯ ಪಾತ್ರೆಯನ್ನೂ ಕೂಸಿಗೆ ಉಣ್ಣಲಿಕ್ಕೆ ಕೊಟ್ಟು, ದನಗಳ ಬಳಿಗೆ ಹೋದಳು. ಇತ್ತಲು ಗಂಜಿ ಕುಡಿಯುವದಕ್ಕೆ ಸವುಟನ್ನು ಕೈಯಲ್ಲಿ ಹಿಡಿದಿರುವ ಕೂಸನ್ನು ಒಂದು ತೋಳವು ಹಿಡಿದು ಕೊಂಡು ಹೋಯಿತು. ಸ್ವಲ್ಪ ಹೊತ್ತಿನ ಮೇಲೆ ತಾಯಿಯು ಬಂದು, ಕೂಸನ್ನೂ ಸವುಟನ್ನೂ ಕಾಣದೆ ಕವಚಿ ಬಿದ್ದ ಕಂಚಿನ ಪಾತ್ರೆಯನ್ನು ಮಾತ್ರ ನೋಡಿ, ತನ್ನ ಕೂಸನ್ನು ತೋಳ ತೆಗದು ಕೊಂಡು ಹೋಯಿತೆಂದು ನಿಶ್ಚೈಸಿ, ಜನರನ್ನು ಕೂಗುವದಕ್ಕೆ ಊರಿಗೆ ಹೋದಳು. ಆ ಸಮಯದಲ್ಲಿ ಒಬ್ಬ ಮಾರ್ಗಸ್ಥನು ದಾರಿ ತಪ್ಪಿ, ಆ ಅಡವಿಯಲ್ಲಿ ತೊಳಲುತ್ತಾ ಇರುವಾಗ—ಮುಟ್ಟಿದರೆ ಹೊಡೆಯುತ್ತೇನೆ, ಮುಟ್ಟಿದರೆ ಹೊಡೆಯುತ್ತೇನೆ ಎಂಬ ಶಬ್ದವನ್ನು ಕೇಳಿ, ಆಶ್ಚರ್ಯ ಪಟ್ಟು, ಮುಂದೆ ಹೋಗಿ, ತನ್ನ ಸುತ್ತಲೂ ನಿಂತು ಕಚ್ಚಲಿಕ್ಕೆ ಬರುವ ೬ ತೋಳದ ಮರಿಗಳನ್ನು ತನ್ನ ಕೈಯಲ್ಲಿ ಹಿಡಿದಿರುವ ಸವುಟಿನಿಂದ ಬೆದರಿಸುತ್ತಾ ಇರುವ ಕೂಸನ್ನು ಕಂಡು, ತೋಳದ ಮರಿಗಳನ್ನು ಓಡಿಸಿ, ಅವುಗಳ ತಾಯಿ ಬಂದೀತೆಂಬ ಭಯದಿಂದ ಆ ಕೂಸನ್ನು ತ್ವರಿತವಾಗಿ ಎತ್ತಿ ಕೊಂಡು ಬಂದು, ಅದರ ತಾಯಿಗೆ ಕೊಟ್ಟನು. ಅವಳು ಬಹಳ ಸಂತೋಷ ಪಟ್ಟು, ತನ್ನ ಕೂಸಿನ ಜೀವವನ್ನು ಉಳಿಸಿದೆ ಎಂದು, ಅವನನ್ನು ಬಹಳ ಉಪಚರಿಸಿ, ತನ್ನ ಕೂಸಿನ ಪ್ರಾಣವನ್ನು ಆಶ್ಚರ್ಯ ರೀತಿಯಿಂದ ತಪ್ಪಿಸಿದ ದೇವರಿಗೆ ಸ್ತುತಿ ಮಾಡಿದಳು. ಊರಿನಿಂದ ಜನ

ರು ದೊಣ್ಣೆಗಳನ್ನು ತೆಗೆದು ಕೊಂಡು ಬಂದು, ತೋಳ
ವನ್ನು ಹೊಡೆದು ಕೊಂದು ಹಾಕಿದರು.

---



೪. ಯೇಸುವು ಮಕ್ಕಳಿಗೆ ಪ್ರೀತಿ ಮಾಡುತ್ತಾನೆ.

ಹುಡುಗರೇ, ಬರ್ರಿ, ನನ್ನನ್ನು ಆಲೈಸಿರಿ. ಯೇಸುವಿನ ಪ್ರೀತಿಯನ್ನು ನಿಮಗೆ ವಿವರಿಸುತ್ತೇನೆ. ಆತನು ಒಂದು ವೇಳೆ ದಿವಸದ ಕಷ್ಟವನ್ನು ತೀರಿಸಿ, ವಿಶ್ರಾಂತನಾದ ಮೇಲೆ, ತಾಯಿಗಳು ಬಂದು, ತಮ್ಮ ಕೂಸುಗಳನ್ನು ಯೇಸುವಿನ ಹತ್ತರ ತಂದು, ಆತನು ತನ್ನ ಕೈಗಳನ್ನು ಮೇಲೆ ಇರಿಸ ಬೇಕೆಂದು ಬಿನ್ನೈಸಲಾಗಿ, ಶಿಷ್ಯರು ತಂದವರಿಗೆ ಹೆದರಿಸಿದರು. ಯೇಸು ಅದನ್ನು ನೋಡಿ, ಕೋಪಿಸಿ, ಕೂಸುಗಳನ್ನು ಅಡ್ಡಿ ಮಾಡದೆ ನನ್ನ ಹತ್ತರ ಬರಗೊಡಿಸಿರಿ; ಯಾತಕ್ಕಂದರೆ ದೇವರ ರಾಜ್ಯವು ಇಂಥವರದಾಗಿದೆ. ನಿಶ್ಚಯವಾಗಿ ದೇವರ ರಾಜ್ಯವನ್ನು ಕೂಸಿನಂತೆ

ಹೊಂದದವನು ಅದರಲ್ಲಿ ಪ್ರವೇಶಿಸನು ಎಂದು ಹೇಳಿದನು. ಆಗಲಾತನು ಅವರನ್ನು ತಬ್ಬಿ ಕೊಂಡು, ಕೈಗಳನ್ನು ಇರಿಸಿ, ಆಶೀರ್ವದಿಸಿದನು.

---



## ಸಾಮ್ಯಗಳು.

### ೧. ಮರಗಳ ಅರಸನು.

ಮರಗಳು ತಮಗೆ ಅರಸನನ್ನು ಅಭಿಷೇಕಿಸ ಹೋಗಲಾಗಿ, ಇಪ್ಪೇ ಮರಕ್ಕೆ: ನಮಗೆ ಅರಸನಾಗು ಎಂದವು. ಇಪ್ಪೇ ಮರವು: ದೇವ ಮನುಷ್ಯರು ನನ್ನಲ್ಲಿ ಹೊಗಳುವ ನನ್ನ ಜಿಡ್ಡನ್ನು ಬಿಟ್ಟು, ಮರಗಳ ಮೇಲೆ ತೂಗ್ಯಾಡಲಿಕ್ಕೆ ಹೋಗಲೋ? ಎಂದು ಅವುಗಳಿಗೆ ಹೇಳಿತು. ಆಗಲು ಮರಗಳು ಅಂಜೂರಕ್ಕೆ: ನೀನು ಬಂದು, ನಮ್ಮ ಮೇಲೆ ಅರಸನಾಗು, ಎಂದವು. ಅಂಜೂರವು ಅವುಗಳಿಗೆ: ನಾನು ನನ್ನ ಮಧೂರ್ಯವನ್ನೂ ಒಳ್ಳೇ ಬೆಳೆಯನ್ನೂ ಬಿಟ್ಟು, ಮರಗಳ ಮೇಲೆ ತೂಗ್ಯಾಡಲಿಕ್ಕೆ ಹೋಗಲೋ? ಎಂದು ಹೇಳಿತು. ಆಗಲು ಮರಗಳು ದ್ರಾಕ್ಷೆಗೆ: ನೀನು ಬಂದು, ನಮ್ಮ ಮೇ

ಲೆ ಅರಸನಾಗು ಎಂದವು. ದ್ರಾಕ್ಷೆಯು ಅವುಗಳಿಗೆ: ನಾನು ದೇವ ಮನುಷ್ಯರಿಗೆ ಆನಂದ ಪಡಿಸುವ ನನ್ನ ರಸವನ್ನು ಬಿಟ್ಟು, ಮರಗಳ ಮೇಲೆ ತೂಗ್ಯಾಡಲಿಕ್ಕೆ ಹೋಗಲೋ? ಎಂದು ಹೇಳಿತು. ಆಗಲು ಮರಗಳೆಲ್ಲಾ ಮುಳ್ಳುಗಿಡಕ್ಕೆ: ನೀನು ಬಂದು ನಮ್ಮ ಮೇಲೆ ಅರಸನಾಗು, ಎಂದವು. ಮುಳ್ಳುಗಿಡವು ಮರಗಳಿಗೆ: ನೀವು ನಿಶ್ಚಯವಾಗಿ ನನ್ನನ್ನು ನಿಮ್ಮ ಮೇಲೆ ಅರಸಾಗಲಭಿಷೇಕಿಸಿದರೆ, ಬಂದು ನನ್ನ ನೆರಳಿನಲ್ಲಿ ಆಶ್ರಯವಾಗಿರಿ; ಇಲ್ಲದಿದ್ದರೆ, ಮುಳ್ಳುಗಿಡದಿಂದ ಬೆಂಕಿಯು ಹೊರಟು, ಲೆಬನೋನಿನ ದೇವದಾರುಗಳನ್ನು ತಿಂದು ಬಿಡಲಿ ಎಂದು ಹೇಳಿತು.

---

೨. ಇರುವೆಯು.

ಮೈಗಳ್ಳನೇ, ಇರುವೆಯ ಹತ್ತರ ಹೋಗಿ, ಅದರ ನಡತೆಯನ್ನು ನೋಡಿ, ಬುದ್ಧಿ ತಂದುಕೋ. ಇರುವೆಗೆ ನ್ಯಾಯಾಧಿಪತಿಯೂ ವಿಚಾರಕನೂ ಅಧಿಕಾರಿಯೂ ಇಲ್ಲದೆ, ಬೇಸಿಗೆಗಾಲದಲ್ಲಿ ಅದರ ರೊಟ್ಟಿಯನ್ನು ಇಟ್ಟು ಕೊಂಡು, ಸುಗ್ಗಿಯಲ್ಲಿ ಅದರ ಆಹಾರವನ್ನು ಕೂಡಿಸುತ್ತದೆ. ಮೈಗಳ್ಳನೇ, ಎಷ್ಟು ಮಟ್ಟಿಗೆ ನಿದ್ರೆಗೈಯುವಿ? ಯಾವಾಗ ನಿದ್ರೆಯಿಂದ ಏಳುವಿ? ಸ್ವಲ್ಪ ನಿದ್ರೆ, ಸ್ವಲ್ಪ ತೂಗಡಿಕೆ, ಕೈಗಳನ್ನು ಕೂಡಿಸಿ ಸ್ವಲ್ಪ ಮಲಗಲಿ ಎನ್ನಲು, ನಿನ್ನ ಬಡತನವು ಪ್ರಯಾಣಸ್ಥನ ಹಾಗೆಯೂ ನಿನ್ನ ದರಿದ್ರವು ಯುದ್ಧಸ್ಥನ ಹಾಗೆಯೂ ಬರುವವು.

---

### ೩. ಬುದ್ಧಿಯುಳ್ಳ ಪ್ರಾಣಿಗಳು.

ನಾಲ್ಕು ಪ್ರಾಣಿಗಳು ಭೂಮಿಯಲ್ಲಿ ಸಣ್ಣವುಗಳಾದಾಗ್ಯೂ ವಿಶೇಷವಾದ ಬುದ್ಧಿಯಿಂದ ತುಂಬಿದವುಗಳಾಗಿವೆ. ಇರುವೆಗಳು ತ್ರಾಣಹೀನ ಜೀವಿಯಾಗಿದ್ದಾಗ್ಯೂ ಬೇಸಿಗೆಯಲ್ಲಿ ತಮ್ಮ ರೊಟ್ಟಿಯನ್ನು ಇಟ್ಟು ಕೊಳ್ಳುತ್ತವೆ. ಮೊಲಗಳು ಬಲಹೀನ ಜೀವಿಗಳಾದಾಗ್ಯೂ ಬಂಡೆಯಲ್ಲಿ ತಮ್ಮ ಮನೆಗಳನ್ನು ಮಾಡುತ್ತವೆ. ಮಿಡಿತೆಗಳಿಗೆ ಅರಸನು ಇಲ್ಲ. ಆದಾಗ್ಯೂ ಅವು ದುಂಡಾಗಿ ಹೊರಡುತ್ತವೆ. ಜಾಡವು ಕೈಗಳಿಂದ ಕೆಲಸ ಮಾಡಿ, ಅರಮನೆಗಳಲ್ಲಿಯೂ ಇರುತ್ತವೆ.

---



### ೪. ದ್ರಾಕ್ಷೇ ತೋಟವು.

ಸುಭೂಮಿಯಾದ ಗುಡ್ಡದಲ್ಲಿ ನನ್ನ ಇಷ್ಟನಿಗೆ ದ್ರಾಕ್ಷೇ ತೋಟವಿತ್ತು. ಅವನು ಅದಕ್ಕೆ ಬೇಲಿ ಹಾಕಿ ಕಲ್ಲುಗಳನ್ನು

ಹೊರಗೆ ಮಾಡಿ, ಒಳ್ಳೇ ದ್ರಾಕ್ಷೆಯ ಬಳ್ಳಿಗಳನ್ನು ನೆಟ್ಟು, ಅದರ ಮಧ್ಯದಲ್ಲಿ ಗೋಪುರವನ್ನು ಕಟ್ಟಿ, ಗಾಣವನ್ನು ಸಹ ಮಾಡಿದನು. ಅದು ದ್ರಾಕ್ಷೇ ಹಣ್ಣುಗಳನ್ನು ಫಲಿಸುವದೆಂದು ಯಜಮಾನನು ನಿರೀಕ್ಷಿಸಿದಾಗ್ಯೂ, ಅದು ಕಾಡ ಕಾಯಿಗಳನ್ನು ಫಲಿಸಿತು. ಹೀಗಿರುವದರಿಂದ ಯೆರೂಸಲೇಮಿನ ನಿವಾಸಿಗಳೇ, ಯೆಹೂದದ ಜನರೇ, ನನಗೂ ನನ್ನ ದ್ರಾಕ್ಷೆಯ ತೋಟಕ್ಕೂ ನ್ಯಾಯ ತೀರಿಸಿರಿ. ನಾನು ಮಾಡಿದ್ದನ್ನು ಹೊರ್ತು ಇನ್ನೇನು ನನ್ನ ದ್ರಾಕ್ಷೇ ತೋಟಕ್ಕೆ ಮಾಡ ಬಹುದಿತ್ತು? ಹ್ಯಾಗಾದರೂ ಅದು ಹಣ್ಣುಗಳನ್ನು ತರುವದೆಂದು ನಾನು ನಿರೀಕ್ಷಿಸಿದಾಗ, ಅದು ಯಾಕೆ ಕಾಡ ಕಾಯಿಗಳನ್ನು ತಂತು? ಆದ ಕಾರಣ ನನ್ನ ದ್ರಾಕ್ಷೇ ತೋಟಕ್ಕೆ ಮಾಡುವದನ್ನು ನಿಮಗೆ ತಿಳಿಸುತ್ತೇನೆ. ನಾನು ಬೇಲಿಯನ್ನು ತೆಗದು ಹಾಕುತ್ತೇನೆ, ಆಗ ತೋಟವು ಹಾಳಾಗುವದು; ಗೋಡೆಯನ್ನು ಕೆಡವುತ್ತೇನೆ, ಆಗಲದು ತುಳಿಯಲ್ಪಡುವದು; ನಾನು ಅದನ್ನು ಕಾಡಾಗ ಮಾಡುತ್ತೇನೆ, ಆಗಲದು ಕತ್ತರಿಸಲ್ಪಡುವದು, ಅಗಿಯಲ್ಪಡುವದು, ಮತ್ತು ಮುಳ್ಳು ದತ್ತೂರಿಗಳು ಎದ್ದು ಬರುವವು; ಆ ಮೇಲೆ ಮಳೆ ಸುರಿಸದ ಹಾಗೆ ಮೋಡಗಳಿಗೆ ಆಜ್ಞಾಪಿಸುವೆನು.



೫. ಸತ್ತವರ ಎಲುವುಗಳು.

ಕರ್ತನ ಕೈ ನನ್ನ ಮೇಲೆ ಇತ್ತು. ಕರ್ತನು ತನ್ನ ಆತ್ಮದೊಡನೆ ನನ್ನನ್ನು ಹೊರಗೆ ತಂದು, ಬೈಲಿನ ಮಧ್ಯದಲ್ಲಿ ವೈದನು. ಆ ಬೈಲು ಎಲುವುಗಳಿಂದ ತುಂಬಿ ಇತ್ತು. ಆತನು ನನ್ನನ್ನು ಅವುಗಳ ಸುತ್ತಲಾಗಿ ದಾಟ ಮಾಡಿದನು. ಅವು ಆ ಬೈಲಿನಲ್ಲಿ ಅತಿ ಹೆಚ್ಚೂ ಬಹಳ ಒಣಗಿದವುಗಳೂ ಆಗಿದ್ದವು. ಆಗಲಾತನು ನನಗೆ: ಮನುಷ್ಯನ ಮಗನೇ, ಆ ಎಲುವುಗಳು ಜೀವವಾದಾವೋ? ಎಂದಾಗ, ಕರ್ತನಾದ ದೇವರೇ, ನೀನೇ ಬಲ್ಲಿ, ಅಂದೆನು. ಆಗಲಾತನು ನನಗೆ: ನೀನು ಆ ಎಲುವುಗಳ ಮೇಲೆ ಪ್ರವಾದನೆ ನುಡಿದು, ಒಣಗಿದ ಎಲುವುಗಳೇ, ಕರ್ತನ ವಾಕ್ಯವನ್ನು ಕೇಳಿರಿ ಎಂದು ಅವುಗಳಿಗೆ ಹೇಳು, ಎಂದನು. ಕರ್ತನಾದ ದೇವರು ಆ ಎಲುವುಗಳಿಗೆ ಹೇಳುವದೇನಂದರೆ—ಇಗೋ, ನಾನು ನಿಮ್ಮೊಳಗೆ ಆತ್ಮವನ್ನು ಕಳುಹಿಸುತ್ತೇನೆ. ನೀವು ಬದುಕುವಿರಿ. ನಾನೇ ಕರ್ತನೆಂದು ನೀವು ತಿಳಿಯುವಿರಿ. ಅಪ್ಪಣೆಯಾದ ಪ್ರಕಾರ ನಾನು ಪ್ರವಾದನೆ ನುಡಿದೆನು. ನುಡಿಯುವಾಗಲೇ ಶಬ್ದವಾಯಿತು. ಅಗೋ ಅಲ್ಲಾಟವು. ಆ ಎಲುವುಗಳು ಒಂದಕ್ಕೊಂದು ಕೂಡಿದವು. ನಾನು ನೋಡಲಾಗಿ, ಅಗೋ, ಅವುಗಳ ಮೇಲೆ ನರಗಳೂ ಮಾಂಸಗಳೂ ಎದ್ದವು. ಅವುಗಳ ಮೇಲೆ ಚರ್ಮ ಮುಚ್ಚಿತು. ಇನ್ನೂ ಅವುಗಳಲ್ಲಿ ಆತ್ಮವು ಇರಲಿಲ್ಲ. ಆಗಲಾತನು ನನಗೆ

